# ಮಿಲನ



ಎಮ್. ಆರ್. ಶಾಸ್ತ್ರಿ, ಎಂ. ಎ., ಬಿ. ಟಿ.

೧೯೫೧

ಪ್ರಕಾಶಕರು

...ಇಂಡಸ್ಟ್ರಿಯಲ್ಸ್ ಏಂಡ್ ಏಜನ್ಸೀಸ್

ಕಾರ್ನಾಡು ಸದಾಶಿವರಾವ್ ರಸ್ತೆ

ಮಂಗಳೂರು

# ಮಿಲನ

★★

ಎಮ್. ಆರ್. ಶಾಸ್ತ್ರಿ, ಎಂ. ಎ., ಬಿ. ಟಿ.

●

೧೯೫೧

●

ಪ್ರಕಾಶಕರು

ದಿ ಇಂಡಿಯನ್ ಇಂಡಸ್ಟ್ರಿಯಲ್ಸ್ ಎಂಡ್ ಏಜನ್ಸೀಸ್

ಮಂಗಳೂರು

●

ಕ್ರಯ ಒಂದು ರೂಪಾಯಿ

# ಮೊದಲ ಮಾತು

ಈ ನೀಳ್ಗವಿತೆಯು ಎರಡು ಹೃದಯಗಳ ಮಿಲನವನ್ನು ಚಿತ್ರಿಸುತ್ತದೆ. ಗಂಡು ಹೆಣ್ಣುಗಳೊಳಗೆ ನೈಸರ್ಗಿಕವಾಗಿ ಬೆಳೆಯುವ ಪ್ರೇಮವೇ ನಿಜವಾದ ವಿವಾಹ ಬಂಧನ. ಇದರಿಂದ ಅನುಕೂಲದಾಂಪತ್ಯವು ಘಟಿಸುವುದು; ಸ್ತ್ರೀ ಪುರುಷರ ಹೃದಯದ ವಿಕಾಸಕ್ಕೆ ಅವಕಾಶವೂ ದೊರೆಯುವುದು. ಹೆತ್ತವರು, ತಮ್ಮ ಮಕ್ಕಳ ವಿವಾಹ ಪ್ರಶ್ನೆಯನ್ನು ಬಗೆಹರಿಸುವಲ್ಲಿ ಈ ವಿಷಯಗಳಿಗೆ ಲಕ್ಷ್ಯಕೊಡುವುದು ಅವಶ್ಯವು. ಈ ತತ್ವಗಳನ್ನು ಇಲ್ಲಿ ಪ್ರತಿಪಾದಿಸಿದೆ. ಇದರಲ್ಲಿ, ಪವಿತ್ರವಾದ ಪ್ರೇಮವು ಸಂಪ್ರದಾಯದ ಹೆಸರಿನಲ್ಲಿ ಬಲಿಯಾಗದಂತೆಯೂ ಮಾನವನ ಸಭ್ಯತೆಗೆ ವಿರುದ್ಧವಾದ ಅಶ್ಲೀಲತೆಯು ಕಾಣಿಸಿಕೊಳ್ಳದಂತೆಯೂ ಎಚ್ಚರಿಕೆ ವಹಿಸಿದೆ. ಎಷ್ಟರ ಮಟ್ಟಿಗೆ ಈ ಕಾರ್ಯವು ಯಶಸ್ವಿಯಾಗಿದೆ ಎಂಬುದನ್ನು ವಾಚಕರು ನಿರ್ಧರಿಸಬೇಕಷ್ಟೆ.

ಇದರ ಹಸ್ತಪ್ರತಿಯನ್ನು ಓದಿನೋಡಿ, ಯೋಗ್ಯವಾದ ಸಲಹೆಗಳನ್ನಿತ್ತ ನನ್ನ ಪೂಜ್ಯ ಮಿತ್ರರಾದ ಶ್ರೀಮಾನ್ ಸೇಡಿಯಾಪು ಕೃಷ್ಣಭಟ್ಟರಿಗೆ ನಾನು ಕೃತಜ್ಞನಾಗಿರುವೆನು. ಇದನ್ನು ಪ್ರಕಟಿಸಲು ಮುಂದೆ ಬಂದ ಮಂಗಳೂರಿನ ಇಂಡಿಯನ್ ಇಂಡಸ್ಟ್ರಿಯಲ್ಸ್ ಮತ್ತು ಏಜೆನ್ಸೀಸ್ ಇದರ ಮಾಲಿಕರಾದ ಶ್ರೀ ಯು. ಗೋಪಾಲಕೃಷ್ಣನವರಿಗೂ ಇದನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶಾಂತಾ ಛಾಪಖಾನೆಯವರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

ಪ್ರೆಸಿಡೆನ್ಸಿ ಕಾಲೇಜು,
ಮದರಾಸು.
1-2-1951.

ಎಂ. ಆರ್. ಶಾಸ್ತ್ರಿ.

# ಮಿಲನ

೧

ಬಾಂದಳದಿ ಭೈರವನು ಮಸೆಯುತಿರುವಸಿಯೆನಲು
ಝಗಝಗನೆ ಕೋಲ್ಮಿಂಚು ಮಿಂಚುತ್ತಲಿತ್ತು
ಹಸಿದೆದ್ದು ರೌದ್ರದಿಂ ಹಲ್ಗಡಿವನೆಂಬಂತೆ
ಗುಡುಗುಡನೆ ಬರಸಿಡಿಲು ಗುಡುಗಾಡುತಿತ್ತು

೨

ಕಾರ್ಮೋಡ ಮುಚ್ಚಿರಲು ಹಗಲು ಮಬ್ಬಾಗಿರಲು
ಎಲ್ಲೆಲ್ಲೂ ಭೀಷಣತೆ ಸುಳಿದಾಡುತಿತ್ತು
ಬುಸುಗುಟ್ಟಿ ಬಿರುಗಾಳಿ ಭರದಿಂದ ಬೀಸುತಿರೆ
ಭೋರೆಂದು ಬಿರುಮಳೆಯು ಸುರಿಯುತ್ತಲಿತ್ತು

೩

ಇಂತೊನಕೆದಾರೆಯಲಿ ಎಡೆವಿಡದೆ ಜಡಿಸುರಿದು
ತೊರೆಯುಕ್ಕಿ ತೆರೆಮುಕ್ಕಿ ನೆರೆನೀರು ನಿಂತು
ಮನೆಯೆಲ್ಲ ಬರಿಗೈದು ಜನವೆಲ್ಲ ಓಡಿದುದು
ಹರಣವೊಂದುಳಿಯಲ್ಕೆ ಹರಕೆಯನೆ ಹೊತ್ತು

೪

ಕೆನ್ನೀರು ನೆರೆಯಾಗಿ ಪೈರೆಲ್ಲ ಮರೆಯಾಗಿ
ಮಜಲು ಬಯಲುಗಳೆಲ್ಲ ಕಡಲಾಗಿ ಎಸೆದು
ಜಲದೇವಿ ತಳೆದೊಂದು ರೌದ್ರಾವತಾರವೆನೆ
ಊರೆಲ್ಲ ಮುಳುಗಿದುದು ಮುಂಗಾರು ಮುನಿದು

೫

ಇಂತೆರಡು ದಿನ ನಿಂತು ಮೂರನೆಯ ಮುಂಜಾನೆ
ನೀರಿಳಿದು ನೆರೆಜಾರಿ ನೆಲವುದಿಸಲಲ್ಲಿ
ಇಳೆಗೆ ಸುಖದುಃಖಗಳ ಬವಣೆಯನ್ನರುಹುತ್ತ
ನೆರೆನೀರಿನಲಿ ಮಿಂದು ಶುಚಿಯಾಯ್ತು ಹಳ್ಳಿ

೬

ನೆರೆಯಿಳಿದ ದಿನದಿರುಳು ಬಿರುವಳೆಯ ಹೊಯ್ಲಿನಿಂ
ಬಿದ್ದೊಂದು ಹಳೆಮನೆಯು ಮಲಗಿದ್ದ ಮಂದಿ
ಮನೆಗೋಡೆ ಜರಿದುರುಳಿ ನೆಲದಡಿಯೊಳಾಗೆ ಜನ
ಇದ ಕೇಳಿ ಮರುಗಿತನುತಾಪದಿಂ ಕಂದಿ

೭

ಮಣ್ ಬಿಡಿಸಿ ಸೆರೆಸಿಕ್ಕಿ ನಜ್ಜುಗುಜ್ಜಾದವರ
ಹೊರದೆಗೆದು ನೋಡಿದರು ಬದುಕಿಹರೆ ಎಂದು
ನಾಲ್ವರೊಳಗೊಬ್ಬನವ ಹದಿನಾರು ಹರೆಯದವ
ಮೊಗಸಿರಿಯ ಶೋಭೆಯಲಿ ಎಸೆವ ಶರದಿಂದು

೮

ಉಸಿರಾಡುತಿಹುದ ಕಂಡುಪಚಾರವೆಸಗಿದರು
ಒಂದೆರಡು ಗಳಿಗೆಯಲಿ ಕಣ್ದೆರೆಯುತೆದ್ದು
ಮನೆಬದುಕು ಬಯಲಾಗಿ ತಾಯ್ತಂದೆ ಮೊದಲಾಗಿ
ಮಡಿದುದನು ಕೇಳಿದನು ಮಣ್ಣಿನಲಿ ಬಿದ್ದು

೯

ಅಲ್ಲಿ ನೆರೆದವರಲ್ಲಿ ಮುದ್ದೂರ ಮಂಜಯ್ಯ
ಮಣ್ ಮುಕ್ಕಿ ಹೊರಗಿಕ್ಕಿದೆಳೆಯನನು ನೋಡಿ
ಹಲಗಾಲದಿಂದೊಳಗೆ ಹುದುಗಿದ್ದ ಸುತಮೋಹ
ಮಾತಾಗಿ ಮೊಳೆದೋರೆ ಕರೆದ ಮುದ್ದಾಡಿ

೧೦

'ಬಾ ರಾಜು ಬದುಕಿದೆಯ ಸಾವಿಲ್ಲ ನಿನಗಿನ್ನು
ಅಳಿದವರಿಗಳಲದಿರು ಬಿದಿಯಾಟವಿಂತು
ಬಾನ್ ಕಳಚಿ ಬೀಳ್ವಾಗ ಕೈಯಾನಲಹುದೇನು
ಕಾಲನುರುಳಿನಲಿಹವು ಈ ಜೀವ ಜಂತು

೧೧

'ಸತ್ತ ತಾಯ್ತಂದೆಗಳಿಗುತ್ತರವ ನಾನೀವೆ
ಮಿಗಿಲಾದ ಮಮತೆಯಿಂದಾರಯ್ವು ನಿನ್ನ
ಬಾರೆ'ಂದು ಭರವಸೆಯ ಭಾಷೆಯನ್ನೀಯುತ್ತ
ಕರೆದುಯ್ದನಾದರದಿ ಬೀಡಿಂಗೆ ತನ್ನ

೧೨

ಮಂಜಯ್ಯನೌದಾರ್ಯವನು ನೋಡಿ ನೆರೆದವರು
ಭಾಪು ಭಾಪೆಂದವನ ಹೊಗಳಿದರು ಮೆಚ್ಚಿ
'ಇವನಂತ ಸಿರಿವಂತರೆನಿತಿಹರು ಲೋಕದಲಿ
ದೀನದಳಿತರ ರಕ್ತ ಹೀರುವರು ಕಚ್ಚಿ'

೧೩

'ಮನೆಯೊಡತಿ ಮೀನಾಕ್ಷಿ ಮಡಿದ ಮೇಲಿವನ ಮನ
ಬೆಣ್ಣೆಯಾಗಿಹುದಯ್ಯ ನೀನೇನ ಬಲ್ಲೆ
ಗಂಡುಸಿಸು ತನಗಿಲ್ಲವೆಂದೆಂಬ ಹಿರಿಮರುಕ
ಕೊರೆಯುತಿರೆ ತಾಳ್ವುದಕೆ ಎದೆಯೇನು ಕಲ್ಲೆ'

೧೪

'ನಟರೊಳಗೆ ನಟನಿವನು ಹೆಸರಾಂತ ಕಿರಿಯ ಕವಿ
ಮಂಜಯ್ಯನಾಸರೆಯು ದೊರಕಿತೇನಿವಗೆ
ಆರಿಗಾವಂದದಲಿ ಬಿದಿಯೊಲಿವನೆಂಬುದನು
ತಿಳಿ' ಎನುತ ಜನರೆಲ್ಲ ತಿರುಗಿದರು ಮನೆಗೆ

೧೫

ಹೊಸಲಿನಲಿ ಹಜ್ಜೆಯಿಡುತಲೆ ಕರೆದ ಮಂಜಯ್ಯ
'ಕಾಮಾಕ್ಷಿ ಎಲ್ಲಿರುವೆ ಬಾರವ್ವ' ಎಂದು
ಅಪ್ಪನಾ ದನಿಗೇಳಿ ಒಳಗಿಂದ ಓಗೊಟ್ಟು
ಓಡಿಬಂದಳು ಚಿಗರಿಮರಿಯಂತೆ ನೆಗೆದು

೧೬

‘ನೆರೆಮನೆಯ ನೀಲಮ್ಮ ನಿನಗಣ್ಣನಿಲ್ಲೆಂದು
ಆವಗಂ ಚುನ್ನವಾಡುವಳೆನುವೆ ಚೆನ್ನೆ
ಹಿರಿಯಣ್ಣ ನಿನಗಿವನು ಹೊಸಬನೆಂದೆಣಿಸದಿರು
ಜವನ ಗಂಟಲ ಹೊಕ್ಕು ಬಂದಿಹನು ರನ್ನೆ

೧೭

‘ಓದಿನಲಿ ಗುರುವೆಂದು ಕೇಳಿಯಲಿ ಕೆಳೆಯನೆಂ-
ದೋವಿಕೊಂಡಿರು ಸತತ ಭಾಗ್ಯಮುಖನಿವನ
ಕಾವ್ಯದಲಿ ಶಾಸ್ತ್ರದಲಿ ಕುಶಲೆಯೆಂದೆನಿಸವ್ವ
ವಿದ್ಯೆಯೇ ಜೀವರಿಗೆ ಜ್ಞಾನೋಪನಯನ’

೧೮

ಆತುರದ ಕಣ್ಣಿನಿಂ ತಾತನನ್ನೀಕ್ಷಿಸುತ
ಮತ್ತೊಮ್ಮೆ ರಾಜುವನು ಬೆಕ್ಕಸದಿ ನೋಡಿ
‘ಇನ್ನೆವರ ಇವನೆಲ್ಲಿ ಅಡಗಿದ್ದ ಹೇಳಪ್ಪ
ಹೇಳೆ’ಂದು ಕೇಳಿದಳು ಕಾಮಾಕ್ಷಿ ಕಾಡಿ

೧೯

‘ಹೆರರ ಮಡಿಲೊಳಗೆ ಮೈಗರೆದಿರ್ದನೆಲೆ ಮಗಳೆ
ನೆಲದಡಿಯೊಳಡಗಿರುವ ನಿಕ್ಷೇಪದಂತೆ
ದೈವವದು ಕಣ್ತೆರೆದು ಕಾಣಿಸಿತು ನಿನಗಿಂದು
ಮರೆಯಲ್ಕೆ ಹೆತ್ತವ್ವನಳಿದಿರುವ ಚಿಂತೆ

೨೦

‘ರಾಜು ಕೇಳೀ ಹೆಣ್ಣು ಭಾಗ್ಯವೃಕ್ಷದ ಹಣ್ಣು
ಹೋಗಾಗ ಮನೆಯಾಕೆ ಹಚ್ಚಿಸಿದ ಸೊಡರು
ಬಿಜ್ಜೆಯಲಿ ಬೆಳಗಿಸಿದನೆ’ಂದುಸಿರೆ ಮಂಜಯ್ಯ
‘ಬಾರಣ್ಣ ನೀನೆ’ಂದು ಕರೆದುಯ್ದುಳವಳು

೨೧

ಎಲ್ಲಿ ನೋಡಿದರಲ್ಲಿ ಬಣ್ಣ ಬಣ್ಣದ ಚಿತ್ರ
ನುಣ್ಣಗಿನ ನೆಲದಲ್ಲಿ ಕನ್ನಡಿಯ ಕಾಂತಿ
ದಾರವಂದದ ಮೇಲೆ ತರತರದ ಕೆತ್ತನೆಯು
ಮನೆಯೇನು ಅರಮನೆಯೆ ಹಿಡಿಸುವುದು ಭ್ರಾಂತಿ

೨೨

ಮನೆಯ ಮುಂದಂಗಳದಿ ಉದ್ಯಾನವೆಸೆದಿತ್ತು
ಪಲತೆರದ ತರುಲತಾಫಲಪುಷ್ಪದಿಂದ
ಮೀನಾಕ್ಷಿ ಕೈಮುಟ್ಟಿ ನೀರೆರೆದು ಬೆಳೆಸಿರ್ಪ
ಗಿಡಬಳ್ಳಿ ಎಸೆದಿಹವು ಎಳೆಮಕ್ಕಳಂದ

೨೩

ಮನೆಯ ಹಿಂದೊಂದು ಹಿರಿಯರಳಿಮರ ಬೆಳೆದಿತ್ತು
ಹತ್ತಾರು ರೆಂಬೆಗಳ ಸುತ್ತಲೂ ನೀಡಿ
ನೆಳಲನದರಡಿಗಿತ್ತು ಹಂದರದ ತೆರನಿತ್ತು
ಬೈಗಿನೊಳ್ ಕುಳಿತಲ್ಲಿ ಜನನಲಿವರಾಡಿ

೨೪

ಇಂತಿರಲು ರಾಜು ಕಾಮಾಕ್ಷಿಯರ ಕೆಳೆತನವು
ಬಾಳ್ನೆಲದಿ ಹರಿಯಿತದು ಹಾಲುನೀರಾಗಿ
ಕೆಳದಿ ಕಣ್ಮರೆಯಾಗೆ ರಾಜು ಕಳವಳಿಸುವನು
ಏಕೆಂಬುದನು ತನ್ನ ಬಗೆಯರಿಯದಾಗಿ

೨೫

ಬಿಡುವೇಳೆ ದೊರೆತಾಗ ಒಡನಾಡುವಳ ಕರೆದು
ಉಪದೇಶಗೈವನವ ವಾತ್ಸಲ್ಯದಿಂದ
ಲೌಕಿಕದ ಆಗಮದ ಕಲೆಗಳನು ಕಲಿಸುವನು
ಕೇಳುವಳು ಕಾಮಾಕ್ಷಿ ಗುರುಭಕ್ತಿಯಿಂದ

೨೬

ಇತಿಹಾಸ ಶಾಸ್ತ್ರದಲಿ ನಿಷ್ಣಾತೆಯೆನಿಸಿದಳು
ಕಾವ್ಯದಲಿ ಕವಯಿತ್ರಿ ತಾನಾಗಿ ಹಾಡಿ
ರಾಜುವಿನ ನೆರವಡೆದು ರಾಜಿಸಿದಳಾ ಕನ್ನೆ
ಕುಂದಣದಿ ಬಂಧಿಸಿದ ವಿದ್ರುಮದ ಮೋಡಿ

೨೭

ಲತೆಯಂತೆ ಬಳುಕುತಿಹ ಲಾವಣ್ಯಮಯ ದೇಹ
ಭಾವದರ್ಶಕವಾದ ಭಾಸುರದ ಕಣ್ಣು
ತಾಳಲಯ ಬದ್ಧವಹ ನರ್ತನಕೆ ಇಂಬಾಗೆ
ನಾಟ್ಯದಲಿ ಮೇನಕೆಯ ಮರೆಸಿದಳು ಹೆಣ್ಣು

೨೮

ಸಾಲೆಯಲಿ ವರ್ಧಂತಿಯುತ್ಸವದ ಸಮಯದಲಿ
ರಂಗಭೂಮಿಯ ಮೇಲೆ ಮಿಂಚಿನೊಲು ಹೊಳೆದು
ಕಟಿಯ ಮೇಲ್ ಕೈಯಿಟ್ಟು ನಟಿಯಾಗಿ ನಲಿವಾಗ
ಮಿಟಮಿಟನೆ ನೋಡಿದನು ಮಂಜಯ್ಯ ನಲಿದು

೨೯

ತಕತಕನೆ ಥಿಂಥಿಮನೆ ದನಿಗೆಯ್ಯೆ ಮದ್ದಳೆಯು
ಗುಲ್‌ಗುಲೆಂದುಲಿಯುತಿರೆ ಕಾಲ್ಗಳಲಿ ಗೆಜ್ಜೆ
ಅಂಗೋದ್ಭವನ ಬೀಸುಗತ್ತಿಯೆನೆ ಕುಣಿವವಳ
ನೋಡುತ್ತ ಜನ ಮರೆದು ತೆಗೆಯುವುದು ಹಜ್ಜೆ

೩೦

ಮನೆಸೇರಿ ಮಂಜಯ್ಯ ರಾಜುವನು ಕರೆದೆಂದ
'ಫಲಿಸಿತಿಂದೀಕೆಯಲಿ ನೀನಿತ್ತ ಕಲೆಯು
ಕಂಡ ಕಣ್ ಸಾರ್ಥಕವು ಮೀನಾಕ್ಷಿ ಮಡಿದಳಲ!
ನಲಿಯುತಿದ್ದಳು ನೋಡಿ ಜೀವಿಸಿರೆ ಸತಿಯು'

೩೧

ಇಂತು ದಿನಗಳೆದು ತಿಂಗಳ ಮೇಲೆ ವರುಷಗಳು
ಉರುಳಲ್ಕೆ ಹೊಸಬೀಡು ಹಸನಾಗಿ ಮನಕೆ
ಅಳಿದ ತಾಯ್ತಂದೆಗಳ ಸೋದರರ ಮರೆದನವ
ಕಾಲವೇ ಅರಮದ್ದು ಶೋಕೋಪಶಮಕೆ

೩೨

ಕೆಳೆಯನೊಡನಾಟದಲಿ ಕಳೆಯಲೆಂಟಬುದಗಳು
ನಲ್ಮೆಹೂ ಹಣ್ಣಾಗಿ ಕಂಗೊಳಿಸೆ ಮನಕೆ
ಅಂಗಲಾವಣ್ಯದಲಿ ಯೌವನವು ಪಲ್ಲವಿಸೆ
ಹದಿನಾರು ವತ್ಸರದ ಹೆಣ್ಣಾದಳಾಕೆ

೩೩

ಸಂಜೆಯಲಿ ಮುಗಿದಿದ್ದ ಪಾರಿಜಾತದ ಮೊಗ್ಗು
ಮುಂಜಾವದಲಿ ಅರಳಿ ಹಿರಿದಾಗುವಂತೆ
ಹರೆಯ ಹದಿನಾರಾಗಿ ಮೈಸಿರಿಯು ಹೂವಾಗಿ
ಹೊಸಹೆಣ್ಣು ಹೊಮ್ಮಿದಳು ನೋಡುತಿದ್ದಂತೆ

೩೪

ಮುಸುಕಿದ್ದ ಶೈಶವದ ತೆರೆ ತೊಲಗಿ ತಾರುಣ್ಯ-
ವಂಗರಂಗದ ಮೇಲೆ ನಲಿದಾಡತೊಡಗೆ
ನೋಟದಲಿ ಚಾಂಚಲ್ಯ ಬೇಟದಲಿ ಚಾಪಲ್ಯ
ಕೊರಲಿನಲಿ ಮಾಧುರ್ಯವೆಸೆದವಾ ಸತಿಗೆ

೩೫

ಕುಡಿನೋಟ ಮಿಂಚಾಗಿ ಯೌವನದ ಸಂಚಾಗಿ
ನಡೆವಾತು ತಡೆಯಾಗಿ ಮನಸೆಳೆಯುತಿರಲು
ಸುಳಿಗುರುಳು ಸುಳಿದಾಡೆ ಜಡೆಯೆರಡು ಜೋತಾಡೆ
ಎಸೆದಿಹಳು ಸಿಂಗರದ ಸಾರಂಗಿಯೆನಲು

೩೬

ಕೆಳದಿಯರ ಕೂಟವದು ಕಾಲಕೂಟವು ಮನಕೆ
ರಾಜುವಿನ ಮೇಳವೇ ಮಧುಬಿಂದುವೆನಿಸಿ
ಅಳಿಯಂತೆ ಸುತ್ತುವಳು ಸುಳಿಯುವಳು ನೆವವಿಡಿದು
ಕಾತರದಿ ಕಾಮಾಕ್ಷಿ ಕೆಳೆಯನನ್ನರಸಿ

೩೭

ಇತಿಹಾಸ ಶಾಸ್ತ್ರಗಳು ಅತಿದೂಷ್ಯವೆಂದೆನಿಸೆ
ಶೃಂಗಾರ ಕಾವ್ಯದೊಳೆ ಜೀವವನು ನೆಟ್ಟು
ಆಹಾರ ನಿದ್ರೆಯನು ವ್ಯವಹಾರವೆಲ್ಲವನು
ತೊರೆದಾಕೆಯೋದುವಳು ದಿನವು ಮನವಿಟ್ಟು

++ ++ ++ ++ ++

೩೮

ಅರಳಿಕಟ್ಟೆಯ ಮೇಲೆ ಕುಳಿತೊಂದು ಸಂಜೆಯಲಿ
ಈಕ್ಷಿಸುತಲಿರೆ ರಾಜು ಆಗಸದ ಚೆಲುವ
ಕೆಮ್ಮೋಡಗಳ ನಡುವೆ ಕೆನ್ನೇಸರಿಸೆದಿತ್ತು
ಅಪರದಿಗ್ಭಾಗದಲಿ ಅಪಹರಿಸಿ ಮನವ

೩೯

ಬಾನಿನಿಂದಿಳಿತಂದ ಸಂಜೆವೆಣ್ಣೆಂಬಂತೆ
ನಸುಗೆಂಪಿನಿಂದೆಸೆವ ವಸನವನು ಧರಿಸಿ
ಮೆಲ್ಲಡಿಯೊಳೈತಂದು ಕಾಮಾಕ್ಷಿಯುಸಿರಿದಳು
'ಆರ ನೀ ನೋಡುತಿಹೆ ಅನುರಾಗವೆರಸಿ'

೪೦

ನುಡಿಗೇಳಿ ಹಿಂತಿರುಗಿ ನಡುಬಳುಕಿ ನಿಂದಿರ್ದ
ಕಡುಚೆಲುವೆಯನು ಕಂಡು ನುಡಿಯಿಸಿದನವನು
'ಕಳಿತ ಮಾವಿನಹಣ್ಣು ಕರದೊಳೇನಿದು ಕೆಳದಿ
ಆರ್ಗೀಯಲೆಂದೆನುತ ತಂದಿರುವೆ ನೀನು'

೪೧

'ರಾಜು ನೀನೈತಂದ ಮುಂಗಾರಿನಲಿ ನೆಟ್ಟ
ಕಸಿಮಾವಿನೆಳೆಸಸಿಯು ಹೊಸಹಣ್ಣು ತಳೆದು
ಮುದ್ದೂರಿನಲಿ ಸಂದ ಜೀವನದ ಮಾನವೆನೆ
ಎಸೆದಿಹುದು ಮನೆಯ ಮುಂದಂಗಳದಿ ಬೆಳೆದು

೪೨

'ಆ ಹಣ್ಣು ನಿನಗೀಯಲಾತುರದಿ ತಂದಿಹೆನು
ಕಾಣಿಕೆಯ ಮನಮೆಚ್ಚಿ ಕೈಕೊಳ್ಳುವುದೆ'ಂದು
ಮಂದಾರಕೋಮಲೆಯು ಮಂದಹಾಸವ ಸೂಸಿ
ನಸುನಾಚಿ ನಿಂದಿರಲು ನುಡಿದನಿಂತೆಂದು

೪೩

'ಮನವೊಲಿದು ನೀನೀಯೆ ಕೊಳ್ಳುವುದಿದು ಹಿರಿದೇನು
ನಲವಿನಿಂ ತುಂಬಿರುವೆ ಜೀವನವನೆನ್ನ
ಅಂತಿರಲಿ ಕಾಮಾಕ್ಷಿ ಅಡಗಿಸದೆ ನೀನರುಹು
ಕಳೆಯೇನು ಮಸುಳಿಹುದು ವದನದಲಿ ನಿನ್ನ'

೪೪

ಹೇಳಿನಲು ಹೇಳದೆಯೆ ನೆಲವ ತಾ ಕೆರೆಯುತಿರೆ
ತನ್ನಾಣೆ ನುಡಿಯೆಂದು ಚಲವಿಡಿದು ಕೇಳೆ
'ಏನೆಂಬೆನೆಲೆ ರಾಜು ನಿರ್ನೆರಂ ನೀ ದಣಿದೆ
ಗುಡ್ಡಕ್ಕೆ ಕಲ್ಮಣ್ಣು ಹೊತ್ತಿನಿತು ವೇಳೆ

೪೫

'ನೀನಿತ್ತ ವಿದ್ಯೆಯನು ಕಲಿಸಿದೀ ಕಲೆಗಳನು
ಬೆಳಗಿಸಲ್ ನೆಲನೆಲ್ಲಿ ಹೋಹುದಿದು ಬರಿದೆ
ವ್ಯವಸಾಯವೆಸಗಲ್ಕೆ ಪರಿಸರದ ನೆರ ಬೇಕು
ಕೊಡದೊಳಗೆ ಸೊಡರನಿಡೆ ಬೆಳಕೀಯಲಹುದೆ

೪೬

'ನರನ ಒಡನಾಟದಲಿ ನುಡಿ ಬಹುದು ಸಾರಿಕೆಗೆ
ಕಾಡಿನಲಿ ಸಂಸ್ಕಾರ ದೊರೆವುದೇನದಕೆ
ಕನಸಹುದು ಈ ದೇಹ ಮಣ್ಣಾಗಿ ಹೋಹನಕ
ಕಲೆಗಳನು ಬೆಳೆಸಬೇಕೆಂಬೆನ್ನ ಬಯಕೆ'

೪೭

'ಒಳಿತಹುದು ಕಾಮಾಕ್ಷಿ ನೀ ಹೊತ್ತ ಹಿರಿಯಾಸೆ
ಜೋಡಾದ ಜೀವನಕೆ ನೆರವಹುದು ಸಮತೆ
ಇನಿತಿರಲು ದೃಢಭಕ್ತಿ ಕರುಣಾಳು ಭಗವಂತ
ಅನುರೂಪಸಹ ವರನ ದೊರಕಿಸನೆ ಕಾಂತೆ

೪೮

‘ಅಳಲದಿರ್ ನೀನೆಂ’ದು ಸಂತೈಸಿ ಕಳುಹಿದನು
 ತನು ಮುಂದೆ ಮನ ಹಿಂದೆ ಸೆಳೆಯುತಿರೆ ನಡೆದು
ತಿರುತಿರುಗಿ ನೋಡುತ್ತ ಮನೆಸೇರುವಳ ಕಂಡು
 ನಿಟ್ಟುಸಿರ ಕರೆದನವಳಾಡಿದುದ ನೆನೆದು

೪೯

ಅಂದಿನಿರುಳಲಿ ರಾಜು ನಿದ್ದೆ ಹಿಡಿಯದೆ ಕಣ್ಗೆ
 ಬಿದ್ದೇಳುತಿಹ ಭಾವದಲೆಗಳಲಿ ಸಿಲುಕಿ
ಒಳಗೊಳಗೆ ಪರಿತಪಿಸೆ ಪಾರಗಾಣುವ ಗೆಯ್ಮೆ
 ವಿಫಲತೆಯನೊಂದಿದುದು ಸ್ತಿಮಿತವನು ಕಲಕಿ

೫೦

‘ಮಾತಿನೊಳಗೆದೆಯೊಲವು ನೋಟದಲಿ ತನಿವೇಟ
 ಬೆರೆತು ಬಗೆ ಬೇರಾಗಿ ಬಲಿತಿಹುದು ಸತಿಗೆ
ಬೆನ್ನಬಿಡಳೆಂಬುದನು ನುಡಿಯುತಿದೆ ನಡೆನುಡಿಯು
 ಬಗೆಯೆರಡು ಹೋಳಾಯ್ತು ಭಾಮಿನಿಯ ಪರಿಗೆ

೫೧

‘ಸುದತಿಯೆನ್ನವಳಲ್ಲ ಸರಸವಿದು ಸರಿಯಲ್ಲ
 ಎಂಬ ನಿರ್ಧಾರವನು ನಿಶಿಯಲ್ಲಿ ಮಾಡೆ
ಕನಸಿನಂದದಿ ತೇಲಿ ಮರವೆಯಲಿ ಸೇರುವುದು
 ಮುಂಜಾನೆ ಎದ್ದವಳ ನಗುಮೊಗವ ನೋಡೆ

೫೨

'ಮರೆವೆನೆಂದರೆ ಸತಿಯ ಸೌಜನ್ಯ ಸೆಳೆಯುತಿದೆ
ನುಣ್ಣದಪು ಬೊಗಸೆ ಕಣ್ ಮರೆಸುತಿವೆ ವೈಯ
ಮನೆ ಬಿಟ್ಟು ತೆರಳುವೆನೆ ಮಂಜಯ್ಯ ಮರುಗುವನು
ಮಗನಂತೆ ಸಲಹಿದನು ಬಿಡದೆನ್ನ ಕೈಯ

೫೩

'ಬಿರುಗಾಳಿ ಬರಲೇಕೆ ಮನ್ತ್ರಜರಿದು ಮಣ್ಣಾಗಿ
ನಾಲ್ವರಲಿ ನಾನೊಬ್ಬನಳಿಯದಿರಲೇಕೆ
ತರಲೇಕೆ ಮಂಜಯ್ಯ ಮಮತೆಯಿಂದೀ ಮನೆಗೆ
ಹಾ ವಿಧಿಯೆ ನಿನ್ನಾಟವೆನ್ನಲ್ಲಿ ಏಕೆ

೫೪

ಕಡೆಗಣ್ಣಿನಿಂದಿಳಿದ ಬಾಷ್ಪದಿಂ ತಲೆದಿಂಬು
ತೊಯ್ದಿರಲು ಹೊರಳಾಡಿ ಕೆದರಿರಲು ಶಯ್ಯೆ
ಕಣ್ಣೀರ ಸುರಿಸುತಿರೆ ಕಣ್ಣಲ್ಲಿ ಬೆಳಗಾಯ್ತು
ವಿಹಗಗಳ ಕಲರವದಿ ಇಳೆ ನಿದ್ದೆ ತಿಳಿಯೆ



೫೫

ಬಾಳುವೆಯ ಬಳ್ಳಿಯನು ಬದುಕಿಸುವ ಕಾವನಿಗೆ
ಹಣ್ಣುಹೂಕಾಯಿಗಳ ಕಾಣಿಕೆಯನಿತ್ತು
ಹೃದಯಗಳನರಳಿಸುತ ವಿರಹಿಗಳನುರುಳಿಸುತ
ನಲಿದಾಡಿ ತುಳಿದಾಡಿ ಮಧುಮಾಸ ಬಂತು

೫೬

ಮಾಂದಳಿರ ತಳಿಯುತ್ತ ಮಲ್ಲಿಗೆಯನೆರಚುತ್ತ
ಕೋಗಿಲೆಯ ಕೊರಲಿನಿಂ ಮಂತ್ರಿಸುತಲಿಂತು
ಕೌಮುದಿಯ ಭಸಿತದಿಂ ವಿರಹಿಗಳ ಮೈಮರೆಸಿ
ಮಾಂತ್ರಿಕನ ಮಿರುಗಿನಿಂ ಮಧುಮಾಸ ಬಂತು

೫೭

ಝೇಂಕರಿಸಿ ಚರಿಸುತಿಹ ಭೃಂಗಾಳಿಯನು ಕರೆದು
ಕೊಳದೊಳೆಸೆವಂಬುಜದ ಬಂಡನೊಸೆದಿತ್ತು
ಸೌರಭ್ಯಮಯವಾದ ತೆಂಬೆಲರ ತೀಡುತ್ತ
ಆತಿಥೇಯನ ತೆರದಿ ಮಧುಮಾಸ ಬಂತು

೫೮

ಮಧುಮಾಸದೈಸಿರಿಯ ಹುಣ್ಣಿವೆಯೊಳೊಂದಿರುಳು
ಆಗಸದೊಳುದಯಿಸಿತು ಪೂರ್ಣೇಂದುಬಿಂಬ
ನಲ್ಲನಲ್ಲೆಯರೆರಡು ಹೃದಯಗಳನೊಂದಾಗಿ
ಬೆಸೆವುದಕೆ ಕರಗಿಸುವ ಕೋವೆಯಿದು ಎಂಬ

೫೯

ಮಧುರಿಮಾಮಯವಾದ ಆ ರಜನಿಯಲಿ ಎಸೆವ
ಬೆಳುದಿಂಗಳಿನ ಹಾಲ ಹೊಳೆ ಹರಿಯುತಿರಲು
ಮಂದಿರಗವಾಕ್ಷದಿಂ ಮುಂದೆ ರಾರಾಜಿಸುವ
ರಾಜನನು ನೋಡಿದನು ಹರಿಸದಿಂ ರಾಜು

೬೦

ಸಂತಸವು ಉಕ್ಕೇರಿ ಸಂಗೀತ ಸುಧೆಯಾಗಿ
ರಾಜುವಿನ ಇನಿಗೊರಲಿನಿಂ ಹೊಮ್ಮಿತಾಗ
ಆ ಗಾನಲಹರಿಯಿಂದುದ್ಯಾನ ಕುಸುಮಗಳು
ಅರಳಿದವು ಕೊನರಿದವು ತರುಲತೆಗಳೋಗ

೬೧

ಸಿಂಗರದ ಸೆಜ್ಜೆಯಲಿ ಶೃಂಗಾರವಲ್ಲರಿಯೊ
ಎನಲೊರಗಿ ಕಾಮಾಕ್ಷಿ ಓದುತಿರಲಲ್ಲಿ
ಗಾನವಾಹಿನಿಯು ಹೂದೋಟದಲಿ ಸುಳಿದು ವಾ-
ತಾಯನದಿ ಧುಮುಕಿ ಸಂಗಮವಾದುದಲ್ಲಿ

೬೨

ಕರ್ಣಕುಹರವನಿಳಿದು ಕಾಮಿನಿಯ ಪ್ರೇಮವನು
ಕುಲುಕುತೆಚ್ಚರಿಸುತಿರಲಾ ಹೃದಯಗೀತೆ
ಹೊತ್ತಗೆಯನೆಸೆದಾಚೆ ಮಂಚದಲಿ ಕುಳ್ಳಿರ್ದು
ಕಿವಿದೆರೆದು ಕೇಳಿದಳು ಮೃಗಶಾಬನೇತ್ರೆ

೬೩

ಗಾನಪೀಯೂಷವನು ಸವಿಸವಿದು ಕಿವಿಗಳಿಗೆ
ಹಲಗಾಲದಾ ಹಸಿವು ಹಿಂಗಿದರು ಜೊತೆಗೆ
ಪಂಚೇಂದ್ರಿಯಂಗಳಲಿ ಕಣ್ಣುನಾಲಗೆಗಳನು
ಅಂಕೆಯಲ್ಲಿರಿಸುವುದು ಅರಿದಾಯ್ತು ಸತಿಗೆ

೬೪

ಹೃದಯತಂತ್ರಿಯು ಮಿಡಿದು ನುಡಿಯಿಸಿದ ಹಾಡೆಳೆಯೆ
ಲೋಹವನು ಬರಸೆಳೆವಯಸ್ಕಾಂತದಂತೆ
ಮಂಚವನು ಬಿಟ್ಟೆದ್ದು ಹೊಸತಿಲನು ದಾಟಿದಳು
ಮನ ಮುಂಚಿ ತನು ಹಿಂಚಿ ಮೈಮರೆದು ಕಾಂತೆ

೬೫

ಭಯಚಕಿತ ಲೋಚನದಿ ನಿಂತು ನೋಡುವಳೊಮ್ಮೆ
ತರಗೆಲೆಯ ದನಿಗೇಳ್ದ ವನಹರಿಣಿಯಂತೆ
ನಡೆವವಳು ನಿಲ್ಲುವಳು ನಿಂತವಳು ನಡೆಯುವಳು
ಭಾಸುರದ ಹೇಮನೂಪುರವಲುಗದಂತೆ

೬೬

ಧವಳಿಮಾಮಯವಾದ ದೇಹಚ್ಛವಿಯು ಹೊಳೆಯೆ
ಪಥವ ಬೆಳಗುತಿಹ ವಿದ್ಯುದ್ದೀಪದಂತೆ
ಸಡಗರದಿ ಬಂದವಳು ಬಾಗಿಲಿನ ತೆರೆಸರಿಸಿ
ರಾಜುವನು ನೋಡಿದಳು ರಾಜೀವನೇತ್ರೆ

೬೭

ವೈಶಾಖಪೂರ್ಣಿಮೆಯ ಚಂದ್ರಮನ ಚೆಲುವಿನಿಂ
ಶೋಭಿಸುವ ಲಲಿತಾಸ್ಯಲಾವಣ್ಯದಿಂದೆ
ಮಂದಿರವ ಬೆಳಗುತಿಹ ಸೊಡರೊ ಎನೆ ಕಂಗೊಳಿಪ
ಕಮನೀಯಗಾತ್ರನಂ ನೋಡಿದಳು ಮುಂದೆ

೬೮

ಉದ್ಯಾನದಲಿ ಎಸೆವ ಚೆಂಗುಲಾಬಿಯ ತೆರದಿ
ಸರಸಿಯಲಿ ಶೋಭಿಸುವ ಶತಪತ್ರದಂತೆ
ಮಂದಸ್ಮಿತಾಸ್ಯದಿಂ ಶಯ್ಯೆಯಲಿ ಪವಡಿಸಿದ
ಸೊಬಗನನು ನೋಡಿದಳು ಸಾರಂಗನೇತ್ರೆ

೬೯

ಆಷಾಢ ಮಾಸದಲಿ ಕರಿಮುಗಿಲಿನೆಡೆಯಿಂದ
ಹೊರಸೂಸುವೆಳೆಮಿಂಚುಬಳ್ಳಿ ತಾನಾಗಿ
ಜವನಿಕೆಯನೋಸರಿಸಿ ಮಂದಿರವನೊಳಹೊಕ್ಕ
ಮುಗ್ಧೆಯನು ಕಂಡನು ಮನೋಮುಗ್ಧನಾಗಿ

೭೦

ಚಂದ್ರಿಕೆಯ ಸಂಗ್ರಹಿಸಿ ಚತುರಾಸ್ಯ ರಚಿಸಿದನೆ
ಹಾಲುಗಲ್ಲನು ಕಡೆದು ಗೈದೊಂದು ಥಳಕೆ
ಧವಳತೆಯಿನೊಪ್ಪುತಿಹ ಸತಿಯ ತನುದೀಧಿತಿಯೆ
ಪ್ರೇಮವನ್ನರ್ಚಿಸುವ ಆರತಿಯ ಬೆಳಕೆ

೭೧

ಬಜ್ಜರದ ಬೆಂಡೋಲೆ ಮಿನುಗುತಿರೆ ಕಿವಿಗಳಲಿ
ಬಿಳಿನೀಲ ಬಣ್ಣದಿಂ ತಾರಕೆಗಳಂತೆ
ನಡುವಿನಲಿ ಆಸ್ಯೇಂದುಬಿಂಬವಿರೆ ಲಾಸ್ಯದಿಂ
ಎಸೆದತ್ತು ಮೋಹಕತೆ ರೂಪುದಳೆದಂತೆ

೭೨

ದಾರವಂದಕ್ಕೆ ಒರಗಿ ದೇಹ ಭಾರವನಿರಿಸಿ
ಕಾತರದಿ ನಿಂತ ಕಾಮಾಕ್ಷಿಯನು ನೋಡಿ
ಸಂಭ್ರಮದಿ ಕುಳ್ಳಿರ್ದು 'ಬಾ ಕೆಳದಿ ಬಾರೆ'ಂದು
ಕರೆದನವ ಭಾಮಿನಿಯ ಬಳಿಗೆ ನಲವೂಡಿ

೭೩

ನಳಿನಾಕ್ಷಿ ಬಾರದೊಡೆ ನಾ ಬರುವೆನೆಂಬಂತೆ
ಬೀರುತಿರೆ ತುರುಬಿನಲಿ ಮುಡಿದಲರ ಕಂಪು
'ಹೊತ್ತಲ್ಲದೀ ಹೊತ್ತಿನಲಿ ಬಂದೆಯೇನೆಲಗೆ
ಹತ್ತದೇನೌ ನಿನ್ನ ಕಂಗಳಿಗೆ ಜೊಂಪು.'

೭೪

ಎಂದು ಸಲ್ಲಾಪಿನಲಿ ಕೇಳಿದರೆ ಕಾಮಾಕ್ಷಿ
ನಸುನಾಚಿ ನಿಟ್ಟುಸಿರ ಮರುವಾತನಿತ್ತು
'ಗಾನದೋಕುಳಿಯಾಟವಾಡುತಿರೆ ನೀ ರಾಜು
ತಪ್ಪಾದುದೇನಯ್ಯ ನಾ ಬಂದ ಹೊತ್ತು

೭೫

'ಆದೊಡಾಂ ತೆರಳುವೆನು' ಎಂದೇಳುತಿರೆ ತರಳೆ
'ಮುನಿದು ನೀ ಹೋಗದಿರು ನಿಲ್ಲೆ'ನುತಲೆದ್ದು
ಮುಂಜೆರಗ ಹಿಡಿದೆಳೆದು ಮಂಚದಲಿ ಕುಳ್ಳಿರಿಸಿ
ಮುಂಗುರುಳ ನೇವರಿಸೆ ನುಡಿದಳವಳೊಸೆದು

೭೬

'ಶುಷ್ಕವೃಕ್ಷಾಳಿಯನು ಪಲ್ಲವಿಸುವೀ ಗೀತ
ಸುಧೆಯನೆದೆಗಳಸದಲಿ ಇನ್ನೆವರ ತುಂಬಿ
ಆರ ಜೀವನಲತೆಯು ಕೊನರಿಸಲು ನೀ ಸುರಿದೆ
ಆವ ಕಾಮಿತ ಫಲವನದರೊಳುರೆ ನಂಬಿ'

೭೭

'ಕಾಮಾಕ್ಷಿ ನೀ ಕೇಳು ಕಾಮಿತಾರ್ಥವನೀವ
ಶಶಿಕಲೆಯನರ್ಚಿಸಿದೆ ನೀ ಗೀತಿಯಿಂದ'
'ಏನಾಯ್ತು ನೀನುಸಿರು ಮನದಾಸೆ ಸಿದ್ಧಿಸಿತೆ
ಹೇಳೆ'ನಲು ನಸುನಾಚಿ ನಿಟ್ಟುಸಿರ ಕರೆದ

೭೮

‘ಇಲ್ಲವೆಂಬೆನೆ ಚೆನ್ನೆ ನಿಂದಿರುವೆ ನೀ ಮುಂದೆ
ಚೆಂದವನ ನೂರ್ಮಡಿಯ ಚೆಂದವನು ತಳೆದು
ಸಿರಿವಂತೆ ನೀನಾಗಿ ಘನಶೀಲವತಿಯಾಗಿ
ಒಲಿದಿರಲು ಕಾಮಿತಕೆ ಕೊರತೆಯೇನಿಂದು’

೭೯

‘ಸಿರಿವಂತೆ ನಾನೆಂದು ಹಳಿಯದಿರು ನೀ ರಾಜು
ನಶ್ವರದ ಸಿರಿಯ ಸಂಪದವೇನು ಭೋಗ್ಯ
ಬಗೆವಳ್ಳಿ ಬಿಟ್ಟಿರುವ ಬಯಕೆಹೂ ದೇವರಿಗೆ
ಬೇಡಾದ ಮೇಲುಂಟೆ ಬಾಳಿನಲಿ ಭಾಗ್ಯ’

೮೦

‘ಬೇಡವೆಂಬನೆ ದೇವ ಬೇಡಿಕೆಯ ಬರಿಗೈದು
ನೇಹಿಗಿತಿ ನಿನ್ನೊಲವು ನಿಜವಾದರೇನು
ಸಿರಿಯ ಹಿರಿಗುವರಿ ನೀ ಬಡವ ನಾನಾಗಿರಲು
ಕೇಳಿದರೆ ನಿನ್ನಪ್ಪ ಕಿಡಿಕಾರನೇನು’

೮೧

ಲಲಿತಾರುಣಾಕ್ಷಿಯಿಂ ಲಾವಣ್ಯ ಸೂಸುತಿರೆ
ಮಾನಿನಿಯು ಮೊಗವೆತ್ತಿ ಭ್ರೂಭಂಗವೆಸಗಿ
ಮುತ್ತಿನೊಲ್ ಬಾಷ್ಪಕಣ ಕೆನ್ನೆಯಲಿ ಹೊಳೆಯುತಿರೆ
ಉಸಿರಿದಳು ಕಲಕೀರವಾಣಿ ಬಗೆಮುಸಗಿ

೮೨

'ಹೇಳಿದರೆ ಹೆಣ್ಣಿವಳು ದಿಟ್ಟೆಯೆಂಬೆಯೊ ಕಾಣೆ
ಹೇಳದೆಯೆ ನಿಲದೆನ್ನ ಮನವಿಂದು ಕೇಳು
ಎಮ್ಮ ಮನೆ ಹೊಲಮಡಿಯ ಮಾರಿದರೆ ಕೊಳಲಹುದೆ
ನಿನ್ನೊಳಿಹ ಕಲೆಗಳನು ಹಣದಿಂದ ಹೇಳು

೮೩

'ಚಿತ್ತರದ ಬಾಳದಲಿ ಬಾಲೇಂದುವಿನ ಹೊಳೆಪು
ಕೊರಲಿನಲಿ ಕಲರುತಿಯ ಮಾಧುರ್ಯವೇನು
ಗುಣಶೀಲದೊಳಗೆಸೆವ ಪುತ್ತಳಿಯ ಹೊನ್ನಿಹುದು
ಧಾರಿಣಿಯ ಮೇಲಿದುವೆ ಸಿರಿಯಲ್ಲವೇನು

೮೪

ಚೆಲುವಿರಲು ನಾಕವದು ಚೆಲುವಿಲ್ಲದಿರೆ ನರಕ
ಚೆಲುವೊಲವುಗಳನುಳಿಯಲಾರಿಗೀ ಲೋಕ
ನಿನ್ನೊಳಿಹ ಬಳಕೆಯಿಂದಿಂತು ಬಿನ್ನಯಿಸಿದೆನು
ಸಿರಿಯ ಸುಟ್ಟೆತ್ತಿಹಿಡಿ ಒಲವೆಂಬ ಬದುಕ

೮೫

'ನೀರೆ ನೀ ನುಡಿಯುವೀ ಪ್ರೀತಿಗೀತಿಯ ಮಾತು
ಬಾಳಿನಲಿ ಬದುಕುವುದೆ ಬನ್ನದಿಂ ಪೊರೆದು
ಸಿರಿವಂತನನ್ನರಸಿ ಹರೆಯ ತುಂಬಿದ ನಿನ್ನ
ಕೊಡದಿಹನೆ ನಿನ್ನಪ್ಪ ಕೈನೀರನೆರೆದು'

೮೬

ನಸುಗೆಂಪಿನಿಂದೆಸೆವ ನಯನದಲಿ ಎದೆಯೊಲ್ಮೆ
ಮಾರ್ಪೊಳೆದು ಮಿರುಗುತಿರೆ ಸುಯ್ಯೆಲರ ಸೂಸಿ
ತನು ಬೆಮರಿ ಬೆಳ್ಪಡರಿ ಬೆಮರಹನಿ ಹೊಳೆಯುತಿರೆ
ತಡೆತಡೆಯುತುಸಿರಿದಳು ಚೆಲುವಾಣ್ಮನರಸಿ

೮೭

"ನಾ ಕಲಿತ ವಿದ್ಯೆಯನು ಒರೆಗೆ ಹಚ್ಚುವೆಯೇನು,
ನೀನುಳಿದರುಳಿವವಳು ನಾನಲ್ಲ ಹೆಣ್ಣು
ಮನವಾರೆ ಮೆಚ್ಚಿದನ ತೊರೆದನ್ಯನನು ವರಿಸೆ
ನಾಕದಲಿ ನಗರೆ ದೇವಾಂಗನೆಯರಿನ್ನು'

೮೮

'ತಾತನರಿಯನು ನಿನ್ನ ಈ ತೆರದ ಪ್ರೀತಿಯನು
ಹೆತ್ತವರ ಕೇಳದೆಯೆ ಎಸಗುವುದು ಸರಿಯೆ
ಜನವೇನನೆಂದಾರು ಮರುಗುತಿದೆ ಮನವಿದಕೆ
ತಪ್ಪಲ್ಲವೇನೆಲಗೆ ನೀನಿಂತು ಗೈಯೆ'

೮೯

'ತಪ್ಪೆನಲು ತಪ್ಪಹುದು ಸರಿಯೆನಲು ಸರಿಯಹುದು
ನಾನರಿಯೆನೀ ತಾರತಮ್ಯವನು ನಲ್ಲ
ಆದೊಡೊಂದಿಹುದೆನ್ನ ದೇವ ದೇವನ ಭಕ್ತಿ
ಧ್ರುವತಾರೆಯೆನಿಸಿಹುದು ಬಾಳಿನೊಳಗೆಲ್ಲ'

೯೦

ಎಂದುಸಿರಿ ತಲೆವಾಗಿ ಸೆರಗತುದಿ ಹಿಸುಕುವಳ
ಕಂಗಳಿಂದುರುಳಿದುದು ಕಂಬನಿಯ ಮುತ್ತು
ಇರುಳಿನಲಿ ಮಿಂಚುತಿಹ ಮಿಂಚುಹುಳವೆಂಬಂತೆ
ಮಿರಮಿರನೆ ಮಿರುಗುತಿರೆ ಮೂಗಿನಲಿ ನತ್ತು

೯೧

ಹತ್ತಿ ಹರಹಿದ ತೆರದಿ ಬಿಳಿಮುಗಿಲು ಬಳಸಿರಲು
ಬಾನಿನಲಿ ಹೊಳೆಹೊಳೆವ ಹುಣ್ಣಿವೆಯ ಚಂದ್ರ
ಪ್ರೇಮಿಗಳ ಹೃದಯದಲಿ ತುಂಬಿದ್ದ ಸಂದೆಯದ
ಕತ್ತಲೆಯ ಕೊಳೆಯನ್ನು ಕಳೆಯುತ್ತಲಿದ್ದ

೯೨

ಉದ್ಯಾನ ಕುಸುಮಗಳ ನರುಗಂಪಿನಿಂ ಪೊರೆದು
ಮೆಲುಮೆಲನೆ ತಂಗಾಳಿ ತೀಡುತ್ತಲಿತ್ತು
ಒಲವೆತ್ತ ಚೆನ್ನಿಗರ ಚೆಲುವೆದೆಯೊಳುಳಿದಿರ್ದ
ವಿರಸವನು ಗುಡಿಸಿ ಶುಚಿಗೊಳಿಸುತ್ತಲಿತ್ತು

೯೩

'ಹಗಲಿರುಳು ಕುದಿಗೊಳ್ಳ ಹೆಣ್ಣೆದೆಯ ಕರೆಗೇಳಿ
ದನಿಗುಡದ ಮನುಜನೆದೆ ಕಲ್ಲೆನಿಸದೇನು
ಪ್ರಲಯ ಬಂದರು ಬರಲಿ ಸತಿಯ ಸಂತೈಸುವೆನು
ಎಂದವಳ ಕಿವಿದೆರೆಗೆ ಸುರಿಸಿದನು ಜೇನು

೯೪

‘ಬಾ ಕೆಳದಿ ಬಾರಿತ್ತ ಜೀವನದ ಸಾರವನು
ನಲ್ಮೆವಟ್ಟಲಿನಲ್ಲಿ ನೀ ತುಂಬಿ ತಾರ
ಹೊಂಗನಸು ನಿಜವಾಗಿ ಹೊಂಬಾಳು ಬೆಳಕಾಗಿ
ಹರುಷ ಹೊಂಪುಳಿಹೋಗುತಿರೆ ನಗುತ ಬಾರ

೯೫

‘ತುಂಬಿಗುರುಳಿನ ಬಾಲೆ ಎರಳೆಗಣ್ಣಿನ ಲೀಲೆ
ಕುಣಿಯುತಿಹ ನಗುಮೊಗದ ಬಿರಿದಲರ ಮಾಲೆ
ತುಂಬಿಯುಬ್ಬಿದ ಗಲ್ಲ ಕೊಬ್ಬಿ ಮಿನುಗುವ ಕೆನ್ನೆ
ಸಿಂಗರದ ಮಜ್ಜಿಗೆಯ ಮೇಲ್ ತೇಲ್ವ ಬೆಣ್ಣೆ

೯೬

‘ಸಿರಿಯ ತಿಂಗಳ ಚೆಲುವು ಜಕ್ಕವಕ್ಕಿಯ ಒಲವು
ತುಂಬಿಹವು ಮುಖದಲ್ಲಿ ಎದೆಯಾಳದಲ್ಲಿ
ಕೋಗಿಲೆಯ ಇಂಚರವು ಅಂಚೆನಡೆ ವಯ್ಯಾರ
ಹಾಸುಹೊಕ್ಕೆನಿಸಿಹವು ನುಡಿನಡೆಗಳಲ್ಲಿ

೯೭

‘ಏನೆಂಬೆ ನಾಚಿಕೆಯೆ ಕೊರಳ ಕೊಂಕಿಸಿ ನೆಲವ
ನೀನು ನೋಡುವೆಯೇಕೆ ಹೊಸತೇನು ಹೀಗೆ
ಪ್ರೇಮಸಾಮ್ರಾಜ್ಯದಲಿ ಮೌನನಾಣ್ಯವು ಕುರುಡು
ಒಲವು ಅಂಜಿಕೆಗಳಲಿ ಹಗೆ ಎಣ್ಣೆಸೀಗೆ’

೯೮

‘ನಾಳೆಯೆಂಬೆಯೆ ನೀನು ವೇಳೆಯೋಡುತಲಿಹುದು
ಕಾಲರಕ್ಕಸನಲ್ಲಿ ಬೆಂಬತ್ತಿ ಬರುವ
ದಾಹವಾರಿಸಿ ಬರುವೆ ನಿಲ್ಲೆಂದರವ ಬಿಡನು
ಕಟುಕನವ ನಿರ್ದಯನು ಸೈರಿಸನು ಸೊಗವ

೯೯

‘ಕಳೆದ ಕತ್ತಲ ತೆರೆಯು ಬರುವ ರಾತ್ರಿಯು ನಿರಿಯು
ಮರೆಯಲ್ಲಿ ಕಾಣದಿವೆ ಹಿಂದು ಮೇಣ್ ಮುಂದು
ಕಳೆದುದಕೆ ಕೊರಗದಿರು ಬರುವುದಕೆ ಬಾಡದಿರು
ಮೆಲುಕಾಡೆ ಚಿಂತೆ ಹನುಮನ ಬಾಲವಹುದು

೧೦೦

‘ನೋಡಲ್ಲಿ ಬಾಂದಳದೊಳುರಿಯುತಿಹ ಬೊಂಬಾಳ
ದೀವಿಗೆಯೊ ಎಂಬಂತೆ ಬೆಳಗುತಿಹ ಶಶಿಯು
ಕ್ಷಣವೊಂದು ದಾಟಿದರೆ ತುತ್ತುಗೊಳ್ಳುವುದು ಮುಗಿಲು
ಎಂಬೆಣಿಕೆ ಕಂದಿಪುದೆ ಭಾಸುರದ ಕಳೆಯು

೧೦೧

‘ಇಂದು ಎನ್ನದು ಮೇಣು ಎನ್ನವಳು ನೀನಿಂದು
ನಾಳೆ ಏನೆಂಬುದನು ಯಾರರಿವರಿಂದು
ಬಾರೆನ್ನ ಮನದನ್ನೆ ಸಿರಿನಗುವ ಸುರಿಸುತ್ತ
ಕಾಡಿಗೆಯ ಕಣ್ಮುಚ್ಚಿ ನೀಡು ಮೊಗವಿತ್ತ’

++ ++ ++ ++ ++

೧೦೨

ಕತ್ತಲೆಯು ಕಳೆದಿತ್ತು ಕೋಳಿ ಕೂಗುತಲಿತ್ತು
ತಂಪಾಗಿ ತೆಂಬೆಲರು ತೀಡುತ್ತಲಿತ್ತು
ಸೃಷ್ಟಿದೇವಿಯ ಮೇಲೆ ಮುತ್ತುಗಳ ಸೇಸೆಯನು
ಸುರಿಸಿ ಹೊಂಚುತಲಿದ್ದ ಮೂಡಣದಿ ಬಾನು



೧೦೩

ಆಸಡಿಯ ಜಡಿಸುರಿದು ನೆರೆತುಂಬಿ ಹರಿವ ಹೊಳೆ
ಬೇಸಗೆಯ ಬಿಸಿಲಿನಲಿ ಬತ್ತುವುದು ಧರ್ಮ
ತುಂಬಿದರೆ ಬತ್ತುವುದು ಬತ್ತಿದರೆ ತುಂಬುವುದು
ಪರಿವರ್ತಿಸುವ ಜಗದ ಜೀವನದ ಮರ್ಮ

೧೦೪

ಕಾಮಾಕ್ಷಿ ರಾಜುವಿನೊಳನುರಕ್ತೆಯಾಗಿಹಳು
ಎಂಬ ನುಡಿ ಹರಿಯಿತದು ಕಿವಿಯಿಂದ ಕಿವಿಗೆ
ನೆರೆಮನೆಯ ನೀಲಮ್ಮ ಕಂಡವರ ಕರೆಕರೆದು
ಉಸಿರದಿರ್ ನೀನೆಂದು ಊದಿದಳು ಒಸಗೆ

೧೦೫

ಆವೂರ ಗುರಿಕಾರನೈತಂದು ಧೈರ್ಯದಿಂ
ಒಂದೊಂದನಾಡುತ್ತ ಗುರಿಯಿಟ್ಟ ಕೊನೆಗೆ
ಮಂಜಯ್ಯ ಕೇಳಿ ಬರಸಿಡಿಲೆರಗಿದಂತಾಗೆ
ತಲ್ಲಣವಗೊಂಡನವ ತನ್ನಾತ್ಮದೊಳಗೆ

೧೦೬

ಈ ನುಡಿಯ ಪರಿಕಿಸಲು ನಡುವಿರುಳು ಪಂಜರದಿ
ಗಿಳಿಯಿಲ್ಲವೆಂದರಿತು ಕತಕತನೆ ಕುದಿದು
ಬಗೆಕದಡಿ ಮಂಜಯ್ಯ ಮುಂಜಾನೆ ಎದ್ದವನೆ
ಕುವರಿಗುಸಿರಿದನಿಂತು ಕಂಬನಿಯ ಕರೆದು

೧೦೭

'ಮುದ್ದೂರ ಬೀಡಿನಲಿ ಮೀನಾಕ್ಷಿ ಹರಕೆಯಿಂ
ಕಂಚಿ ಕಾಮಾಕ್ಷಿಯನು ಮೆಚ್ಚಿಸುತಲಂದು
ಕುಲದ ಕುಡಿ ಕೊನರಿಸುವ ಮಾಲತೀಲತೆಯೆಂದು
ಪಡೆದಿರಲು ನೀನಾದೆ ಮುಳ್ಳುಗಿಡವಿಂದು

೧೦೮

'ಹತ್ತುವರುಷದ ಮೊದಲು ಮೀನಾಕ್ಷಿ ಮಡಿವಾಗ
ಮಿಡಿವ ಕಂಬನಿಯಿಂದ ಎದೆಗಪ್ಪಿಕೊಳುತ
ಎಳೆಹಸುಳೆ ಕಾಮಾಕ್ಷಿ ಕಾವುದೀಕೆಯನೆಂದು
ಬೇಡಿ ಕಣ್ಮುಚ್ಚಿದಳು ಕರಕರಿಸಿಕೊಳುತ

೧೦೯

'ನೀರಿನ್ನಲಿ ನೆನೆಯುವುದು ಬಿಸಿಲಿನಲಿ ಬಾಡುವುದು
ಎಂದೆಂಬ ಸಂದೆಯದ ತಳ್ಳಂಕದಿಂದ
ಈರೈದು ವರುಷಗಳಲಾರಯ್ದೆನೆಲೆ ಮಗಳೆ
ಎದೆಯಂಗಳದೊಳರಳಿರುವ ಹೂವಿನಂದ

೧೧೦

'ಕುಲಶೀಲವತಿಯೆಂದು ನಾ ನೆಚ್ಚಿ ಹೊರೆದಿರಲು
ಮತಿವಿಕಳೆಯಾಗುತ್ತ ಎಸಗಿದೆಯ ದ್ರೋಹ
ಸ್ವಚ್ಛಂದ ವೃತ್ತಿಯಿದು ಶೋಭೆಯೇ ಸತಿಯರಿಗೆ
ರೌರವದೊಳದ್ದುವುದು ಜೀವನವ ಮೋಹ

೧೧೧

'ನಿನ್ನಿಂದಲುಭಯಕುಲವರಳುವೀ ಹಿರಿಯಾಸೆ
ಬಾಂದಳದ ಸಮವಾಗಿ ಬಯಲಾಗೆ ನೋಡಿ
ಕರುಳ ಕೊರೆವಳಲಿನಿಂ ಮನಕುದಿದು ಮೀನಾಕ್ಷಿ
ಹರಿಯಿಸಳೆ ಸಗ್ಗದಲಿ ಕಂಬನಿಯ ಕೋಡಿ

೧೧೨

'ಕಳೆದುದಕೆ ಮರುಗದಿರು ಕಣ್ಮುಚ್ಚಿ ಧುಮುಕದಿರು
ಕಾರ್ಗಾಲ ದಾಟಿದರೆ ಕಾಮಾಕ್ಷಿ ನಿನಗೆ
ಕುಲರೂಪಲಾವಣ್ಯದಿಂದೆಸೆವ ಜೋಡಿಗನ
ಅರಸಿ ನಾ ತಾರೆನೇ ಅರುದಿಂಗಳೊಳಗೆ'

೧೧೩

'ಮಗಳೆಂಬ ಮಮತೆಯಿಂದೊಲಿದು ನೀ ಕೇಳುವೊಡೆ
ಅರುಹುವೆನು ನಾನೊಂದು ಬಿನ್ನಹದ ಮಾತ
ಮನವೊಲಿಯದಾತನಿಗೆ ಧಾರೆಯೆರೆದೀವುದಕೆ
ಮದುವೆಯೆಂದರೆ ಮದ್ದೆ ನೀ ಹೇಳು ತಾತ

೧೧೪

'ಎನ್ನೈದು ಹರಣಗಳನರ್ಪಿಸಿಹೆನಾತನಿಗೆ
ಬಗೆಯೊಲಿದು ಭಾವಿಸಿದೆನೆದೆಯಾಣ್ಮನೆಂದು
ಎನ್ನಲ್ಲಿ ಮನವಿಲ್ಲ ಹರಣಂಗಳೈದಿಲ್ಲ
ಈ ಬರಿಯ ಡಿಂಬವನು ಕೊಳಲಿ ಪಸೆನಿಂದು'

೧೧೫

ಕಂಪಿತಾಧರಿಯಿಂತು ಕಂಗಳಲಿ ಬಾಷ್ಪಜಲ
ತುಳುಕುತಿರಲುರಿಮುಸಗಿದುರಗಿಯೆಂಬಂತೆ
ಮುಂಜೆರಗ ನಿರಿವಿಡಿದು ನಿಂದಿರಲು ಮುಂಜಯ್ಯ
ಗುಡುಗುಡಿಸಿ ಹೊರವಂಟನರಿಮುರುಳನಂತೆ

೧೧೬

ರಾಜುವನು ಕರೆದೆಂದ 'ದಿಕ್ಕಿಲ್ಲದೆಳೆಯನನು
ಮೃತ್ಯುವಿನ ಧವಡೆಯಿಂದೆಳೆತಂದೆ ಮನೆಗೆ
ಹೆತ್ತಮಗನಿಂ ಮಿಗಿಲ ಮಮತೆಯಿಂ ಸಲಹಿರಲು
ತಿಂದನ್ನ ನಂಜಾಗದಿಹುದೇನು ನಿನಗೆ

೧೧೭

'ನಾಳೆ ನೇಸರು ಮೂಡುವನಿತರೊಳ್ ಬೀಡಿಂಗೆ
ಮೊಗದಿರುಹುತಾವಲ್ಲಿಗಾದೊಡಂ ಸಾರು
ಉಂಡಮನೆಗೆರಡೆಣಿಸಿದವಗಿಳೆಯೊಳೆಡೆಯರಸು
ಮುಗಿದುದಿಂದಿಗೆ ನಿನಗೆ ಮುದ್ದೂರ ನೀರು'

೧೧೮

ಅಂದಿನಿಳಿಹೊತ್ತಿನಲಿ ಹಿತ್ತಿಲಿನ ಅರಳಿಮರ
ತೀಡುವೆಳಗಾಳಿಯಿಂ ಮಲಮಲೆಂದುಲಿದು
ಹೊಂಬಾಳ ಸವಿಗನಸು ಕಹಿಯಾದುದನು ಕಂಡು
ಉಬ್ಬೆಗದಿ ಅಳುತಿತ್ತು ನಿಟ್ಟುಸಿರ ಕರೆದು

೧೧೯

ಅದರಡಿಯ ಕಟ್ಟೆಯಲಿ ಕೆನ್ನೆಯಲಿ ಕರವಿಟ್ಟು
ಬೆಳುಗಲ್ಲಿನಿಂ ಸಮೆದ ಬೊಂಬೆಯೆನೆ ಕುಳಿತು
ಕಳವಳಿಸುತಿರೆ ರಾಜು ಹೆತ್ತವನ ಕಣ್ತಪ್ಪೆ
ಅರಸಿ ಬಂದಳು ಕಾಂತೆ ಅವನ ಹೊಲಬರಿತು

೧೨೦

ಹೂಸರದ ಜೋಲ್ಮುಡಿಯು ಧೂಸರಿತವಾಗೆಸೆಯೆ
ಕಣ್ಣೀರನಿಕ್ಕುತ್ತ ಕೆಮ್ಮನೆಯೆ ನಿಂತು
ಬೈಗುಮಲ್ಲಿಗೆಯ ತೆರ ಬಾಡಿ ಬೆಂಡಾದವಳ
ಗಲ್ಲವನಲುಗಿ ರಾಜು ನುಡಿಯಿಸಿದನಿಂತು

೧೨೧

'ಕಾಮಾಕ್ಷಿ ಅಳಲದಿರು ಕಂಬನಿಯ ಕರೆಯದಿರು
ಭವಿತವ್ಯ ತಪ್ಪುವುದೆ ಜಗದ ಜೀವರಿಗೆ
ತಿಂಗಳಿಗೆ ಕಾರ್ಮೋಡ ಕವಿದುದನು ನಾ ತೋರಿ
ಬಾಳುವೆಯ ಬವಣೆಯನು ತಿಳಿಸೆನೇ ನಿನಗೆ'

೧೨೨

'ಮನದನ್ನ ಕೇಳ್ ನಿನ್ನ ಬಾಳುವೆಯ ಬಾನಿನಲಿ
ಎನ್ನೊಲವು ಕವಿಯಿಸಿತು ಕರಿಮುಗಿಲಿನೊಡ್ಡ
ಅಪರಾಧಿ ನಾನಿಂದು ಕ್ಷಮಿಸುವೆಯ ಎಲೆ ನೀರ
ತಿಳಿಯ ಬಾಳ್ಗನ್ನಡಿಗೆ ಅಂಟಿದೀ ಜಿಡ್ಡ'

೧೨೩

ಎಂದುಸಿರಿ ಸೆರಗಿಂದ ಕಂಬನಿಯನೊರಸುತ್ತ
ಸೆರೆಬಿಗಿದು ನುಡಿಯಾರಿ ನಿಂದಿರಲು ರಾಜು
'ನೀರೆ ನೀನಳಲದಿರು ಎನಗಾಗಿ ಮರುಗದಿರು
ಎಮ್ಮೊಲವಿನಾಟವಿದು ಜೀವನದ ಜೂಜು

೧೨೪

'ಮೆಲ್ಪಾಸಿನಂತಿರ್ಪ ಮಿದುವಟ್ಟೆಯಂ ತೋರಿ
ಪ್ರಣಯಿಗಳನೊಯ್ಯುವುದು ಗೆಲವಿನಿಂ ಪ್ರೇಮ
ಒಳಹೊಕ್ಕು ನಡೆವಾಗ ಮುಳ್ಳುಬೇಲಿಯ ದಾರಿ
ಪಥಿಕರಂ ಕಂಗೆಡಿಸಿ ಕೆಡಹುವೀ ನೇಮ

೧೨೫

'ನೋವಿನಲಿ ಮರುಗದಿಹೆ ಸಾವುದಕೆ ಅಳುಕದಿಹೆ
ಈ ಜಗದ ವೈಭವವ ನಗುನಗುತ ತೊರೆವೆ
ಬಿಂಬಾಧರೆಯೆ ಸೊದೆಯ ಸುರಿಸುವೀ ಚೆಂದುಟಿಯ
ತೊರೆವುದಕೆ ಮರುಗುತಿದೆ ಮನವೇನನೊರೆವೆ

೧೨೬

‘ಮಾನವನ ಸುಂದರದ ಜೀವನದ ಹಂದರಕೆ
ನಾರಿಯರ ನಳಿದೋಳು ಆದರಿಪ ಕಂಬ
ಸಂಸ್ಕೃತಿಯು ಅರಳಿಹುದು ಸಾಮ್ರಾಜ್ಯವುದಿಸಿಹುದು
ಸುಂದರಿಯರೊಲ್ಮೆಯಿದು ಜೀವನಕೆ ಜಂಬ’

೧೨೭

‘ಬರುವೆನೆಂದರೆ ನಲ್ಲ ಬೇಡವೆನ್ನುವೆಯಲ್ಲ
ಹರಣಗಳು ನಿಲ್ಲವಿವು ನನ್ನೆದೆಯನುಳಿದು
ನೀ ಹೋದ ಮೇಲಿನ್ನು ಮನೆಬದುಕು ಮಸಣವಿವು
ಕರೆಸದಿರೆ ತೆರಳುವೆನು ದೇಹವನು ತೊರೆದು’

೧೨೮

‘ನಿನ್ನೆದೆಯ ನಿಚ್ಚಳದ ನೇಹವನು ನಾನರಿವೆ
ಕಾತರಿಸಿ ಬಾಳುವೆಯ ಕೆಡಿಸದಿರು ತರಳೆ
ಮನೆಗೊಂದು ಬೆಳಕಾಗಿ ಬಳೆದಿರುವೆ ನೀ ರನ್ನೆ
ಮಂಜಯ್ಯ ಬದುಕುವನೆ ನಾವಿಂತು ತೆರಳೆ

೧೨೯

‘ಪ್ರೇಮಮಯನೆಂದೆನಿಪ ಪರಮಾತ್ಮನೊಲಿವನ್ನೆ
ಪರಿಶುದ್ಧವಾದೊಲವು ಎದೆಯೊಳಗೆ ನೆಲಸೆ
ಈ ಹಿರಿಯ ತತ್ವವನು ಬಾಳಿನಲಿ ತೋರಿಲಗೆ
ಠಾತನಲಿ ತುಂಬಿರುವ ತಮವನ್ನು ಹರಿಸೆ

೧೩೦

'ತಂದೆಯಾಕ್ರೋಶದುರಿಯಲಿ ಬೆಂದು ಬದುಕಿದರೆ
ನಲಿನಲಿದು ನೆರೆಯುವೆವು ಈ ಬಾಳಿನಲ್ಲಿ
ಪ್ರೇಮಾಧಿದೇವತೆಯು ಮೊಗದಿರುಹೆ ವಿರಹದಲಿ
ಅಳಿವೈದಿ ಕೂಡುವೆವು ಮರುವಾಳಿನಲ್ಲಿ'

೧೩೧

ಎಂದವನು ಇಂದೀವರಾಕ್ಷಿಯನು ತಕ್ಕೈಸ್ಸಿ
ತನ್ನಿನಿಯನಾಪತ್ತಿನಲಿ ಒದಗಲೆಂದು
ಜಕ್ಕಸರವೊಂದನ್ನು ಕೊರಲಿಂದ ಜಾರಿಸುತ
ಚೀಲದೊಳಗಿಕ್ಕಿದಳು ಅವನರಿಯನಂದು

೧೩೨

ಎರೆಯನಂ ಬೀಳ್ಕೊಟ್ಟು ತಿರುಗಿದಳು ತನ್ನರಿಗೆ
ಅಳಲಿನಿಂ ತೀವಿರ್ದ ಎದೆಯ ಹೊರೆ ಹೊತ್ತು
ಕಿರಣಗಳ ಹೆರದೆಗೆದು ಕಾಲಿಮೆಯ ಕರೆಯುತ್ತ
ಪಡುಗಡಲಿನೊಡಲೊಳಗೆ ಕಂತಿದುದು ಹೊತ್ತು



೪

೧೩೩

ಶೋಭಿಸುವ ಪಾರದವ ಬೇರ್ಪಡಿಸೆ ಕೈಪಿಡಿಯು
ಬೀರುವುದೆ ಕಮನೀಯವಾಗೆಸೆವ ಕಳೆಯ
ಒಡನಿದ್ದು ಕಳೆಗೊಡುವ ಮನದೆರೆಯ ಮರೆಯಾಗೆ
ಥಳಥಳಿಸಿ ತೊಳಗುವುದೆ ತರುಣಿಯರ ಹೃದಯ

೧೩೪

ಕನಸುಮನಸಿನಲಿರುಳುಹಗಲೆನದೆ ಮನಮೆಚ್ಚಿ
ಧ್ಯಾನಿಸಿದ ದೈವ ಕಣ್ಮರೆಯಾದ ಮೇಲೆ
ತಳದಿಂದ ಬೇರ್ಕೊಯ್ದ ಎಳಲತೆಯು ತಾನಾಗಿ
ಬಸವಳಿದು ಬಾಡಿದಳು ಬೇಟದಿಂ ಬಾಲೆ

೧೩೫

ಉಣಿಸಿನಲಿ ರಸವಿಲ್ಲ ಉಡಿಗೆಯಲಿ ವಶವಿಲ್ಲ
ಅಂಗಶೃಂಗಾರದಲಿ ಅಭಿಲಾಷೆಯಿಲ್ಲ
ಏಕೆಂದು ಕೇಳಿದರೆ ಸಾಕು ನೀ ನುಡಿಸದಿರು
ಪೋಗೆನುತಲಟ್ಟುವಳು ಕೆಳದಿಯರನೆಲ್ಲ

೧೩೬

ದುಗುಡವನೆ ಮುಸುಕಿಟ್ಟು ಮಂಚದಲಿ ಮಲಗಿದ್ದ
ಮಗಳ ಮೌನವ ಮುರಿಯೆ ಮಂಜಯ್ಯ ಬಂದು
‘ಸೆಜ್ಜೆಯನು ತೊರೆಯದಿಹೆ ಮಜ್ಜನವನೆಸಗದಿಹೆ
ಉಣಿಸಿನಲಿ ಮನಮುನಿಸು ಬಂದುದೇನಿಂದು

೧೩೭

‘ಎಳವೆಯಲಿ ದೇಹವನು ಬಳಲಿಸುವೆ ಏಕಿಂತು
ಅನುರಾಗರೋಗವಿದು ಬಲವಾಯ್ತೆ ಮನಕೆ
ಕೆಳದಿಯರು ನುಡಿಸಿದರೆ ಕಣ್ಣೆತ್ತಿ ನೋಡದಿಹೆ
ಹೊರೆದುದಕೆ ನೀನಿದುವೆ ಹೊತ್ತಿರುವ ಹರಕೆ’

೧೩೮

ಸವಿಮಾತು ಕಿವಿಗಳಿಗೆ ಸಾಯಕದ ಮೊನೆಯಾಗೆ
ಸಾವುದೇ ನಿಜವೆಂದು ಸತಿಯು ಸುಯ್ದಾಡೆ
ಹೊರಳಿ ಮಲಗಿದ ಮಗಳ ಕೊರಳಿನಲಿ ಜಕ್ಕಸರ
ಕಾಣದಿರೆ ಕೇಳಿದನು ಕೆಳದಿಯರ ಕೂಡೆ

೧೩೯

‘ದಿನ ಮೂರು ಕಳೆದಾಯ್ತು ಕೊರಳ ಸರ ಕಳವಾಗಿ
ಜೀಯ ನಾವರಿಯೆವಿದನೆ’ಂದುಸಿರೆ ಕೆಳದಿ
ನೊಂದ ಕಾಳೋರಗನ ನೋಯಿಸಿದ ತೆರನಾಗೆ
ಕಿಡಿಕಾರಿ ಮಂಜಯ್ಯ ಕನಲಿದನು ಮನದಿ

೧೪೦

‘ಹಾರ ಕಣ್ಮರೆಯಾದ ಕಾರಣವ ನಾನರಿವೆ
ನಿನ್ನೆದೆಯ ಕದ್ದವನೆ ಒಡವೆಯನು ಕದ್ದ
ವಂಚಕನನುಳಿಸಲ್ಕೆ ಸಂಚನೆಸಗುವೆ ನೀನು
ಈ ಬಾಲಬುದ್ಧಿಗಾನರಿಯುವೆನು ಮದ್ದ

೧೪೧

‘ಪಳಿವೆಂಬ ಕೊಳೆಕೆಸರು ಬಳಿಗಾದ ಮೇಲಿನ್ನು
ಕಳುಹೆನೇ ದ್ರೋಹಿಯನು ಕತ್ತಲೆಯ ಮನೆಗೆ’
ಎಂದವನು ಹೊರಬಂದು ಬರೆಹದಲಿ ಹೊರಿಸಿದನು
ಕಳವಿನಾರೋಪವನು ರಾಜುವಿನ ತಲೆಗೆ

೧೪೨

ರಾಜಭಟರೈತಂದು ರಾಜುವನು ಮುತ್ತಿದರು
ಬಡಿಗೋಲು ಹಿಡಿಕೋಳಗಳನೆಲ್ಲ ತೋರಿ
ಅವನಿಯೊಳಗೊಗೆದಿರುವ ಜವನ ಭಟರೆಂಬಂತೆ
ಹೂಂಕರಿಸಿ ಗಜರಿದರು ಬಿರುನುಡಿಯ ಕಾರಿ

೧೪೩

‘ಒಡವೆಯನು ಕದ್ದೊಯ್ದು ಓಡಿರುವೆ ನೀನೆಂದು
ಮುದ್ದೂರ ಮಂಜಯ್ಯನಿತ್ತಿಹನು ವರದಿ
ನಡೆದುದನು ನುಡಿಯದಿರೆ ನುಡಿಸುವೆವು ನಾವೆ’ಂದು
ಅಗಡುತನವಾಡಿದರು ಕರವಿಡಿದು ಭರದಿ

೧೪೪

‘ನಿಜವ ನಾ ನುಡಿವೆನೇ ನಿಜರಮಣಿ ನವೆಯುವಳು
ಘಾತುಕನ ಬಿರುನುಡಿಯು ಗರಹೊಡೆದು ಕಂದಿ
ಎಳೆಯಳಭಿಮಾನವನು ಉಳಿಸುವೆನು ನಾನೆ’ಂದು
ಕಳವಿನಾರೋಪವನು ಹೊತ್ತನವ ಶಿರದಿ

೧೪೫

ಎಳೆವಳ್ಳಿಯಂ ಕೊಯ್ದು ಕೊಳಚೆಯಲಿ ಎಸೆವಂತೆ
ಎಳೆಯನಂ ಎಳೆತಂದು ಕಾವಲರ ಮನೆಗೆ
ಹೊಣೆಯಿತ್ತು ತೆರಳೆಂದು ಹಣವಿತ್ತು ನಡೆಯೆಂದು
ಹೀನವಾಕ್ಯವನಾಡಿ ಪೀಡಿಸಿದರೊಳಗೆ

೧೪೬

ನವೆಯುತಿರೆ ಬಂಧನವು ನಲಿಯುತಿರೆ ಮೋಕ್ಷವದು
ಸೆರೆವಿಡಿಯಲಹುದೇನು ಸಿಲುಕದಿಹ ಮನವ
ಸತಿಯ ಸಂಸ್ಮರಣೆಯಿಂದಾತ್ಮ ಚೇತರಿಸುತಿರೆ
ನೆನಹಿನಲಿ ಕಳೆದನವ ಬಂಧನದಿ ದಿನವ

೧೪೭

‘ಕಾರಿರುಳು ಕರಿದಾಗಿ ಬಾಳುವೆಯು ಬರಿದಾಗಿ
ಕೆಳೆಯಿಲ್ಲದೀ ಎದೆಯು ಶೂನ್ಯವಾಗಿರಲು
ಮೆಲುನಗೆಯ ಹೊಂಬೆಳಕನೊಸೆದಿತ್ತ ಮುದ್ದೂರ
ಮುಗುದೆಯನ್ನಿಂದಿಗೂ ನಾ ನೆನೆಯುತಿರುವೆ

೧೪೮

‘ತರಳಾಕ್ಷಿ ಓದಿನಲಿ ತಲ್ಲೀನೆಯಾಗಿರಲು
ಪೆರಸಾರಿ ಕರಗಳಿಂ ಕಂಗಳನು ಮುಚ್ಚಿ
ಕೆಳದಿಯೆಂದೇ ತಿಳಿದು ಕರವಿಡಿದು ಸೆಣಸಾಡಿ
ನಾಚಿದಳನಿಂದಿಗೂ ನಾ ನೆನೆಯುತಿರುವೆ

೧೪೯

‘ಕಾವ್ಯೋಪದೇಶವನ್ನಾಲಿಸುತ ಕಾಮಾಕ್ಷಿ
ಎವೆಯಿಕ್ಕದೆನ್ನನೇ ನೋಡಿ ಮೈಮರೆಯೆ
ಕರತಾಮರಸದಿಂದ ಹೊತ್ತಗೆಯು ಕೆಳಜಾರಿ
ಸಂಭ್ರಾಂತೆಯಾದುದನು ನಾ ನೆನೆಯುತಿರುವೆ

೧೫೦

‘ತಣ್ಣೆಲರು ಬಿಸಿಯಾಗಿ ತಣ್ಣೀರು ಕುದಿಯಾಗಿ
ವಿರಹದುರಿಯಲಿ ಬೆಂದು ನಾ ಹೊರಳುತಿರಲು
ಶೀತಲಸುರಮ್ಯ ತನುವಿಂದೆನ್ನ ಬಿಗಿದಪ್ಪಿ
ಬದುಕಿಸಿದಳಿಂದಿಗೂ ನಾ ನೆನೆಯುತಿರುವೆ

೧೫೧

‘ಒಂದಿರುಳು ಕಾಮಾಕ್ಷಿ ಹುಸಿಮುನಿಸಿನಲಿ ದೂರ
ಮಲಗಿದ್ದು ನಿದ್ದೆಯಲಿ ಕನವರಿಸುತೆದ್ದು
ನಳಿದೋಳಿನಿಂದೆನ್ನನಾಲಿಂಗಿಸುತ ನೋಡಿ
ನಾಚಿದುದನಿಂದಿಗೂ ನಾ ನೆನೆಯುತಿರುವೆ

೧೫೨

‘ದಣಿವಿನಿಂ ಮೈಮರಿದು ಸೆಜ್ಜೆಯಲಿ ಒರಗಿರಲು
ಮುನಿದಿಹೆನು ನಾನೆಂದು ಭಾಮಿನಿಯು ಭ್ರಮಿಸಿ
ಕಣ್ಣೀರ ಕೋಡಿಯನು ಸುರಿಸೆ ತೊಯ್ದಿಹ ವಸನ
ತಾಗಲೆಚ್ಚತ್ತುದನು ನಾ ನೆನೆಯುತಿರುವೆ

೧೫೩

‘ಮುದ್ದೂರ ಜಾತ್ರೆಯೆಂದೂರೆಲ್ಲ ನಲಿಯುತಿರೆ
ಹೋಗೆಯಾ ನೀನೆಂದು ನನ್ನವಳ ಕೇಳೆ
ಎನ್ನೆದೆಯು ದೇಗುಲವು ನಿನ್ನೊಲವು ವಿಗ್ರಹವು
ಪೆರತಿಲ್ಲವೆನಗೆಂದು ಹೇಳಿದುದ ನೆನೆವೆ

೧೫೪

‘ಚೆನ್ನೆ ನೀ ಧರಿಸಿದ್ದ ಚಿನ್ನದೊಚ್ಚರವೆಲ್ಲಿ
ಎಂದೊಮ್ಮೆ ಬರಿಗೊರಲ ಕಂಡು ನಾ ಕೇಳೆ
ಆ ಚಿನ್ನ ಚೆನ್ನಲ್ಲ ಈ ಚಿನ್ನ ಚೆನ್ನೆಂದು
ಬೊಟ್ಟಿಟ್ಟು ಮುಟ್ಟಿ ಮೈ ಹೇಳಿದುದ ನೆನೆವೆ

೧೫೫

‘ಪೋಪೆನೆಂದರೆ ಬಿಡದೆ ಬಾಹುವಲ್ಲರಿಯಿಂದ
ದೃಢವಾಗಿ ದೇಹವನು ಬಂಧಿಸುತ ನಿಂತು
ವಕ್ಷದಲಿ ಶಿರವಿಟ್ಟು ನೀಲಕುಂತಳೆ ಬೇಡಿ
ಕಾಡಿದುದನಿಂದಿಗೂ ನಾ ನೆನೆಯುತಿರುವೆ

೧೫೬

‘ಪ್ರೇಮವಿದು ಶಾಶ್ವತವೆ ಪ್ರೇಯಸಿಯೆ ಬೆಸಸೆಂದು
ಸುಳಿಗುರುಳ ಸವರುತ್ತ ನಿಂದಿರಲು ನಾನು
ಹೇಮಕಂಕಣ ಕರದಿ ಕಣಕಣೆಂದುಲಿಯುತಿರೆ
ಪರಿರಂಭಣಂಗೈದು ರೋಲಂಬಚಿಕುರೆ

೧೫೭

‘ಪರಮಾತ್ಮ ನಿತ್ಯನೇ ನೀರ ನೀನರುಹೆಂದು
ನೀರಿಳಿವ ನಯನದಿಂದೀಕ್ಷಿಸುತ ತನ್ನ
ಮುಂಜೆರಗಿನಿಂದೆನ್ನ ಕಂಬನಿಯನೊರಸುತ್ತ
ನಿಂದವಳನಿಂದಿಗೂ ನಾ ನೆನೆಯುತಿರುವೆ

೧೫೮

‘ಚಿರಕಾಲ ನಿನಗೆನಗೆ ವಿರಹ ಬಂದಡಸಿದರೆ
ಏಗೈವೆಯೆಲೆ ರನ್ನೆ ನೆನೆವೆಯಾ ಎನಲು
ಅಲರಾಗಿ ನಗುಬೀರಿ ಎಲರಾಗಿ ಸಲೆತೀಡಿ
ಹೋದಲ್ಲಿ ನಾ ಬರುವೆನೆಂದುದನು ನೆನೆವೆ’

++ ++ ++ ++ ++

೧೫೯

ರಾಜುವನು ಸೆರೆವಿಡಿದ ವಾರತೆಯನೋದಿ ಸತಿ
ಹಸಿವು ನೀರಡಿಕೆಗಳ ಗಸಣೆಯನೆ ತೊರೆದು
ಮರಣವೇ ಬರಲೆಂದು ಮೌನದಿಂ ಮಲಗಿದಳು
ಕಟ್ಟೆರಕ ಬದುಕುವುದೆ ಒಲಿದೆದೆಯನುಳಿದು

೧೬೦

ಮಂಜಯ್ಯನನು ನೋಡಿ ಕೆಳದಿಯರು ಉಸಿರಿದರು
'ಮಗಳ ಗೋರಿಯ ಮೇಲೆ ಜಯದ ತಾಂಡವವ
ಮನೆಯ ಮುಂದರಚುತಿದೆ ಕೆಟ್ಟ ಉಳಿಗನ ಹಕ್ಕಿ
ವೈಪರೀತ್ಯವ ನೆನೆದು ಬೆದರುತಿದೆ ಮನವೆ'

೧೬೧

ಬಿಸಿಲಿನಿಂ ಬಾನಲಾದಲರಿನೊಲು ಕಳೆಗುಂದಿ
ಹಾಸುಗೆಯ ಹಿಡಿದಿರುವ ಕುವರಿಯನು ಕಂಡು
ಹೋದವಳ ನೆನಹು ಬರೆ ಹೌಹಾರಿ ಮಂಜಯ್ಯ
ಮರುಗಿದನು ಮನದೊಳಗೆ ವ್ಯಾಕುಲತೆಗೊಂಡು

೧೬೨

'ಕಪ್ಪಾದ ಕಡೆಗಣ್ಣು ಜಾಗರಣೆಯಿಂ ಕಳೆದ
ನಿಶೆಗಳಿಗೆ ಸಾಕ್ಷಿಯಾಗಿಹುದಿಂದು ಮಗಳ
ಕೃಶವಾದ ಉದರವಿದು ಬೆನ್ನಂಟಿಕೊಂಡಿಹುದು
ಉಪವಾಸವ್ರತದಿಂದ ಬಳಲಿಹಳು ಬಹಳ

೧೬೩

'ಅನುರಾಗವಿನಿತಿಹುದು ಎಂಬುದನ್ನರಿಯದೆಯೆ
ನಲ್ಲನವರಿಯಾತ್ಮವನು ನೋಯಿಸಿದೆ ಬರಿದೆ
ತನುಜೆಯನು ಮಮತೆಯಿಂದಾರಯ್ಯಬೇಕೆಂದು
ಮಡಿವಾಗೆ ಮೀನಾಕ್ಷಿಯೊರೆದುದನು ಮರೆದೆ

೧೬೪

'ಹಿರಿಯಾಲ ಮರದಂತೆ ಬೆಳೆವುದಕೆ ನಾನಾದೆ
ಕಲೆಗಳಲಿ ಕುಶಲತೆಯ ಪಡೆವುದಕೆ ಮಗಳು
ಹಳೆಯಕಾಲದ ವೃದ್ಧ ಸಂಪ್ರದಾಯದಿ ಬದ್ಧ-
ನಾದವಗೆ ರುಚಿಸುವುದೆ ಪ್ರಣಯದೀ ತಿರುಳು

೧೬೫

'ಈ ತನ್ವಿಗೀತನೇ ವರನಹನು ಮುಂದೆಂದು
ಜನ ಮುಟ್ಟದೈದಿದನೆ ಜರಿದುರುಳೆ ಮನೆಯು
ಅರಿಕೆಯಲಿ ಚೆಲುವಿನಲಿ ಅನುರೂಪನಿವನಹುದು
ಬೇರ್ವರಿದು ನಟ್ಟಿಹುದು ಭಾವಕಿಯ ಬಗೆಯು

೧೬೬

'ಹರಣವನೆ ಹೊಣೆಯಿತ್ತು ಪ್ರಣಯವನು ಸಾಧಿಪಳು
ಕುವರಿಗಲ್ಲದ ಭಾಗ್ಯ ಬೇಕೇನು ನನಗೆ'
ಎಂದವನು ಕಾವಲರ ಮನೆಯೊಡೆಯನನು ಕಂಡು
ಅಣುಗಿಯನು ಉಳಿಸೆಂದು ಅರುಹಿದನು ಅವಗೆ

೧೬೭

'ಮನಮೆಚ್ಚಿ ಮಗಳಿತ್ತಳೆಂಬುದನ್ನರಿಯದೆಯೆ
ಕಳವೆಂದು ತಿಳಿಸಿದೆನು ಕಳವಳಿಸಿ ಮನದಿ
ಮಗಳ ಮಾನವನುಳಿಸೆ ಬಂಧನದಿ ನವೆದನಿವ
ಬಿಡಿಸದಿರೆ ಭಗವಂತ ಮೆಚ್ಚುವನೆ ಜಗದಿ'

೧೬೮

‘ಏನಯ್ಯ ಮಂಜಯ್ಯ ಅಪರಾಧವಿಲ್ಲದೆಯೆ
ದಂಡಿಸಲು ಸಂತಸವು ದೊರೆವುದೇನೆಮಗೆ
ತಪ್ಪೊಪ್ಪುಗಳ ತಿಳಿದು ಶಾಸನವ ಗೈವಾತ
ಮೇಲೊಬ್ಬನಿರೆ ವಿದಿತವಹುದೆಲ್ಲ ಕೊನೆಗೆ’

೧೬೯

ಬಾಗಿಲಿನ ಮರೆಯಲ್ಲಿ ಮಂಜಯ್ಯ ನಿಂದಿರಲು
ಸೆರೆಮನೆಯನೊಳನ್ನೊಕ್ಕು ರಾಜಭಟನಂದು
ದರಹಸಿತವದನದಿಂದೆಸೆವ ಕೈದಿಯ ಕಂಡು
ಸರಸಕಾಗಿಯೆ ನುಡಿದ ವಿರಸವನು ನೆನೆದು

೧೭೦

‘ಕರಿನೀರವಾಸವನು ವಿಧಿಸುವರು ನಿನಗಿಂದು
ಸೊರಗಿ ಸಾಯುವೆ ವಿರಹದಲಿ ನೊಂದು ಬೆಂದು
ಈ ಭೋಗಭಾಗ್ಯವನು ತೊರೆದು ತೆರಳುವೆ ನಾಳೆ
ಬಾಳಿನಲಿ ನಗುವುದಕೆ ನಿನಗಿದುವೆ ವೇಳೆ’

೧೭೧

‘ಪರುಷ ತಾಗಿದ ಲೋಹ ಕನಕವಾಗುವ ನಿಯಮ
ಕನಕಕ್ಕೆ ಕರಿಕತನ ಸೋಕುವುದೆ ಮರಳಿ
ಆ ಸ್ವರ್ಗಸುಂದರೀಸ್ಪರ್ಶವಿಕಸಿತವಾದ
ಹೃದಯಸುಮವಿದು ಬಾಡುವುದೆ ಒಮ್ಮೆ ಅರಳಿ

೧೭೨

‘ಆ ಸ್ನಿಗ್ಧ ಸೌಂದರ್ಯ ವಾರಾಶಿಯಲಿ ಮಿಂದು
ಪರಿಶುದ್ಧವಾದಾತ್ಮವಿದು ಎನ್ನದಿಂದು
ರೋಗರುಜಿನದ ಹೊಲೆಯು ಸಾವುನೋವಿನ ಕೊಳೆಯು
ಅಂಟುವುದೆ ಇದಕಿನ್ನು ಜನ್ಮಾಂತರದಲಿ’

೧೭೩

ಎನೆ ಕೇಳಿ ನಸುನಗುತ ರಾಜಭಟನುಸಿರಿದನು
‘ಆಡಲೇನಡರಿಹುದು ವ್ಯಾಮೋಹ ತಲೆಗೆ
ನಿನ್ನನೀ ದುರ್ಗತಿಗೆ ಉರುಳಿಸಿದ ಹೆಮ್ಮಾರಿ
ಅರಿಯಲ್ಲವೇನಯ್ಯ ಅವನಿಯಲಿ ನಿನಗೆ’

೧೭೪

‘ಹುಲ್ಲೆಯನು ಹಿಡಿತಿಂದು ಹೊಟ್ಟೆಯನು ಹೊರೆಯುತಿಪ
ಹುಲಿಬಲ್ಲುದೇನದರ ನಯನಗಳ ಚೆಲುವ
ನೀನಾಡುವೀ ನೀತಿ ನಿನ್ನ ವೃತ್ತಿಯ ರೀತಿ
ಅಳೆಯಬಲ್ಲುದೆ ನಿನ್ನ ಬಡಿಗೋಲು ಒಲವ

೧೭೫

‘ಇಳಿದವನು ಕಂಡಿಹನು ಕಾಸಾರದಾಳವನು
ತಡಿಯಲ್ಲಿ ನಿಂತವನು ತಿಳಿವ ಬಗೆಯೆಂತು
ಆ ತನ್ವಿಯಂತರ್ಯದೊಲವನೊರೆಹಚ್ಚಿದವ
ನಾನಲ್ಲವೇನಯ್ಯ ನೀ ತಿಳಿವೆಯೆಂತು’

೧೭೬

ಎನುತಿರಲು ಮುಂಜಯ್ಯ ಕೇಳುತಲೆ ಮೈಮರೆದು
ತುಳುಕುತಿರೆ ಸಂತಸದಿ ಕಂಬನಿಯು ಹೊನಲು
ಬಾಗಿಲಿಂದೊಳಧುಮುಕಿ ರಾಜುವನು ಬಿಗಿದಪ್ಪ-
ಲುದುರಿದುದು ವದನದಿಂದೆಸೆವ ನುಡಿಯರಲು

೧೭೭

'ಕಲ್ಮನವು ಹೊನಲಾಯ್ತು ಬಿಲ್ಮರಿದು ಗೆಲವಾಯ್ತು
ನಲ್ಮೆಗಾತಿಯ ಜನ್ಮ ಹೊನ್ನಾಯ್ತು ಧರೆಗೆ
ಅಳಿಯದೊಲವಿನ ಒರತೆ ಎದೆಯೊಳಗೆ ಒಸರುತಿರೆ
ಅಳಿಯನೆಂದರೆ ನೀನೆ ಪಡಿಯಾರು ನಿನಗೆ'

೧೭೮

ಕರಿಮುಗಿಲು ಚೆದರಿತ್ತು ಗರಿಮುಗಿಲು ಹರಡಿತ್ತು
ತೊಳತೊಳಗುತೆಳನೇಸರೆಸೆದಿತ್ತು ನಭದಿ
ತಿಳಿನೀರಿನೊಳಗಿನನ ಪಡಿವರಿಜು ಮಾರ್ಪೊಳೆಯೆ
ಬಿರಿದರಳಿ ನಗುತಿತ್ತು ಕಮಲಿನಿಯು ಕೊಳದಿ



ಹರಿಹರಗಾಗಿ

ಪಂಡಿತವರ್ಯ ಮುಳಿಯ ತಿಮ್ಮಪ್ಪಯ್ಯನವರ
ಉದ್ಗ್ರಂಥಗಳು



## ನಾಡೋಜ ಪಂಪ

ಮಹಾಕವಿ ಪಂಪನ ಕುರಿತು ಮತ್ತು ಅವನ ಕಾವ್ಯಗಳ ಕುರಿತು ಮಾಡಿದ
ದೀರ್ಘ ಕಾಲದ ಸಂಶೋಧನದ ಫಲ

**ಬೆಲೆ ರೂ. 4—0—0**

## ಪಾರ್ತಿ ಸುಬ್ಬ

ಯಕ್ಷಗಾನ ಕವಿಕುಲಗುರು ಪಾರ್ತಿ ಸುಬ್ಬನ ವಿಚಾರವಾಗಿ
ಬರೆದ ಸಂಶೋಧನಾತ್ಮಕ ಗ್ರಂಥ

**ಬೆಲೆ ರೂ. 3—0—0**

## ನವನೀತ ರಾಮಾಯಣ

ನೂತನ ರೀತಿಯ ಪ್ರೌಢ ಕಾವ್ಯ

**ಬೆಲೆ ರೂ. 1—0—0**



ದಿ ಇಂಡಿಯನ್ ಇಂಡಸ್ಟ್ರಿಯಲ್ಸ್ ಮತ್ತು ಏಜನ್ಸೀಸ್
ಕಾರ್ನಾಡು ಸದಾಶಿವರಾವ್ ರಸ್ತೆ
ಮಂಗಳೂರು, ದ. ಕ.